ಸಂಪುಟ ೧೫ ಸಂಚಿಕೆ ೧ ಮಾರ್ಚ್ 1994

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 20
ಆಜೀವ ಚಂದಾ : ರೂ. 200

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು).
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ನಮ್ಮ ನಿಮ್ಮ ನಡುವೆ

ಈ ಸಂಚಿಕೆಯೊಂದಿಗೆ 'ಬ್ಯಾಂಕಿಂಗ್ ಪ್ರಪಂಚ'ದ ಹದಿನೈದನೆಯ ಸಂಪುಟ ಆರಂಭವಾಗುತ್ತಿದೆ. ಹದಿನಾಲ್ಕು ವರ್ಷಗಳು ಮುಗಿಯುತ್ತಿವೆ.

ಬ್ಯಾಂಕಿಂಗ್ ಕ್ಷೇತ್ರದಲ್ಲಿ ಕನ್ನಡದ ಸೊಲ್ಲು ಕೇಳಿಸುವಂತೆ ಮಾಡಬೇಕೆಂಬ ಗೀಳು ಹತ್ತಿಸಿಕೊಂಡ ಕೆಲವು ಬಿಸಿರಕ್ತದ ಗೆಳೆಯರು ಇಂಥ ಒಂದು ಪತ್ರಿಕೆ ಆರಂಭಿಸಬೇಕೆಂದು ಯೋಚಿಸಿದಾಗ ಇದೊಂದು ಅವ್ಯಾವಹಾರಿಕವಾದ ಹುಚ್ಚು ಎಂದು ನಕ್ಕವರು ಹಲವರು. 'ಆರಂಭಿಸಿ ; ಆದರೆ ಬರೀ ಬ್ಯಾಂಕಿಂಗ್ ಕ್ಷೇತ್ರಕ್ಕೇ ಇದನ್ನು ಸೀಮಿತಗೊಳಿಸಿಕೊಳ್ಳಬೇಡಿ' ಎಂದು ಹೇಳಿದವರು ಕೆಲವರು. ಪ್ರತಿ ಸಾರಿಯೂ ಒಂದು ಸಂಚಿಕೆ ತುಂಬುವಷ್ಟು ಲೇಖನಗಳನ್ನು ಬರೆಯಲು ವಿಷಯಗಳಾದರೂ ಎಲ್ಲಿವೆ ? ಎಂಬುದು ಅವರ ಪ್ರಶ್ನೆ. ಅರ್ಥಶಾಸ್ತ್ರದ ಎಲ್ಲ ವಿಷಯಗಳನ್ನೂ ಇದು ಒಳಗೊಳ್ಳಲಿ, ಎಂದರು ಅವರು. ಆಗ ಪುಟಗಳೂ ತುಂಬುತ್ತವೆ, ಲೇಖಕರು ಸಿಗುತ್ತಾರೆ, ಎಂಬುದು ಅವರು ನೀಡಿದ ಕಾರಣ.

ಬ್ಯಾಂಕಿಂಗಿಗೆ ಬಂಜೆತನವಿಲ್ಲ. ವಿಪುಲ ಸಾಮಗ್ರಿ ಒದಗಿಸುವ ಸಾಮರ್ಥ್ಯ ಉಂಟು ಅದಕ್ಕೆ. ಅದು ನಿಂತ ನೀರಲ್ಲ, ಒಣಗಿದ ಮರವಲ್ಲ. ಅದರದು ನಿರಂತರ ಚಿಲುಮೆ. ವೃಕ್ಷದ ಕೊಂಬೆರೆಂಬೆ ಬೇರು ಬಿಳಲುಗಳು ಅಪಾರ—ಇಂದು ಬ್ಯಾಂಕಿಂಗಿಗೆ ಸಂಬಂಧಪಡದ ಚಟುವಟಿಕೆ ಯಾವುದುಂಟು ? ಅದರೊಂದಿಗೆ ಸಂಪರ್ಕ ಇಟ್ಟುಕೊಳ್ಳದ ಯಾವ ಉದ್ಯಮವುಂಟು ? ವ್ಯವಹಾರವುಂಟು ? ಕುಬೇರನಿಂದ ಕಡ ಪಡೆದ ತಿರುಪತಿಯ ದೇವರ ಹಾಗೆ ಸರ್ಕಾರಗಳೇ ಬ್ಯಾಂಕುಗಳನ್ನಾಶ್ರಯಿಸುತ್ತಿವೆ, ಚಿನ್ನದ ಕೆಚ್ಚಲಿನ ಈ ಕಾಮಧೇನುಗಳನ್ನು ವಿಶ್ವಾಮಿತ್ರನಂತೆ ತಮ್ಮವನ್ನಾಗಿ ಮಾಡಿಕೊಳ್ಳಲು ಶಾಸನ ಮಾಡುತ್ತಿವೆ, ಕೆಚ್ಚಲಿಗೂ ಚೂರಿ ಹಾಕುತ್ತಿವೆ. ಅಲ್ಲದೆ ಬ್ಯಾಂಕಿಂಗಿನ ಸ್ವರೂಪವೇ ಇಂದು ಚಂಚಲವಾಗುತ್ತಿದೆ, ವೈವಿಧ್ಯಮಯವೂ ಸಂಕೀರ್ಣವೂ ಆಗುತ್ತಿದೆ. ಬ್ಯಾಂಕಿಂಗಿನ ಬತ್ತಳಿಕೆಗೆ ಅನೇಕ ಹೊಸ ಹೊಸ ಸಮ್ಮೋಹನಾಸ್ತ್ರಗಳು ಸೇರಿಕೊಳ್ಳುತ್ತಿವೆ. ಸದಾ ವಿಕಸನಶೀಲವಾದ, ಜೀವಚೈತನ್ಯಪೂರ್ಣವಾದ ಬ್ಯಾಂಕಿಂಗ್ ಕುರಿತ ವಿಚಾರಗಳಿಗೆ ಕೊನೆಯೆಲ್ಲಿ ? ಸಾಹಿತ್ಯಕ್ಕೆ ನಿಲುಗಡೆಯೆಲ್ಲಿ? ಬ್ಯಾಂಕಿಂಗಿನ ವಿವಿಧ ಮುಖಗಳನ್ನೂ ವ್ಯಾಪಾರಗಳನ್ನೂ ಅರಿತು ಒಕ್ಕಣಿಸಬಲ್ಲವರ ತಂಡ ನಮಗೆ ಬೇಕಷ್ಟೆ. ಈ ಕೆಲಸ ಮಾಡಬಲ್ಲವರು ಬ್ಯಾಂಕಿಂಗಿನಲ್ಲಿ ನಿರತರಾದವರಲ್ಲದೆ ಬೇರೆ ಯಾರು ತಾನೇ ಆಗಬಲ್ಲರು ? ಈ ಸಂಪನ್ಮೂಲವನ್ನು ಬ್ಯಾಂಕುಗಳೊಳಗಿಂದಲೇ ನಾವು ಸಂಪಾದಿಸಿಕೊಳ್ಳಬೇಕು ಎಂಬುದು ಅಂದಿನ ಚಿಂತನೆಯಾಗಿತ್ತು,

ಆದರೂ ಇದು ಆರಂಭಶೌರ್ಯ ಆಗಬಾರದೆಂಬ ಎಚ್ಚರಿಕೆಯೂ ಇಲ್ಲದಿರಲಿಲ್ಲ. ಬ್ಯಾಂಕಿಂಗಿನಲ್ಲಿ ಬರೆಯುವುದಕ್ಕೇನಿದೆ ಎಂದು ಮೂಗೆಳೆಯುವವರ ಮುಂದೆ ನಗೆಪಾಟಲಾಗಬಾರದಲ್ಲ ! ದೇವತೆಗಳು ಕಾಲಿಡಲು ಅಂಜುವ ಎಡೆಗೆ ಮೂರ್ಖರು ಮುನ್ನುಗ್ಗುತ್ತಾರೆ ಎಂಬ ಮಾತು ನಿಜ ಎನ್ನಲು ಅವರು ನಮ್ಮೆಡೆಗೆ ಬೆಟ್ಟುಮಾಡುವಂತಿರಬಾರದು. ಆದ್ದರಿಂದ ಆರಂಭದಲ್ಲಿ ಅರ್ಧವಾರ್ಷಿಕವಾಗಿ ಇದನ್ನಾರಂಭಿಸೋಣ ಎಂಬುದು ಈ ಗೆಳೆಯರ ತೀರ್ಮಾನವಾಗಿತ್ತು. ಹಾಗೆಯೇ ಮೊದಲಿಟ್ಟ 'ಬ್ಯಾಂಕಿಂಗ್ ಪ್ರಪಂಚ' ಕೆಲವೇ ವರ್ಷಗಳಲ್ಲಿ ತ್ರೈಮಾಸಿಕವಾಯಿತು. ಈ ಹದಿನಾಲ್ಕು ವರ್ಷ ಒಂದು ಸಂಚಿಕೆಯೂ ತಪ್ಪದೆ ಇದು ಪ್ರಕಟವಾಗುತ್ತ ಬರುತ್ತಿದೆ. ಕನ್ನಡದ ಸಂದರ್ಭದಲ್ಲಿ ಇದು ಒಂದು ಹೆಮ್ಮೆಯ ಮಾತೇ ಎನ್ನಬೇಕು.

ಆದರೆ ಈ ಹದಿನಾಲ್ಕು ವರ್ಷಗಳಲ್ಲಿ ನಾವು ಸಾಧಿಸಿದ್ದಾದರೂ ಏನು ? ಇದೊಂದು ಸವಾಲು ಎಂಬ ರೀತಿ ಈ ಪ್ರಶ್ನೆ ಹಾಕುವುದಾದರೆ ಇದಕ್ಕೆ ನಮ್ಮಲ್ಲಿ ಉತ್ತರ ಸಿದ್ಧವಾಗುಂಟು. ಈ ಹದಿನಾಲ್ಕು ಸಂಪುಟಗಳ ಪುಟಗಳನ್ನು ತಿರುವಿ ಹಾಕುವವರಿಗೆ ನಾವು ಏನು ಸಾಧಿಸಿದ್ದೇವೆ ಎಂಬುದು ಗೊತ್ತಾದೀತು. ಮೊತ್ತಮೊದಲಿಗೆ ಬ್ಯಾಂಕಿಂಗ್ ಮತ್ತು ಹಣ ಕುರಿತಂತೆ ಇಷ್ಟೊಂದು ವಿಷಯಗಳಿವೆಯೆ ಎಂದು ಅಚ್ಚರಿಯಾಗದಿರದು. ಇದರ ಕಲಾಪಗಳು ಎಷ್ಟೊಂದು ವೈವಿಧ್ಯಮಯ ಎನಿಸದಿರದು. ಬರೆದಷ್ಟೂ ಹೊಸಹೊಸ ವಿಷಯಗಳು ದೊರಕುತ್ತಲೇ ಇವೆ. ಅಂತರರಾಷ್ಟ್ರೀಯವಾಗಿ ಬ್ಯಾಂಕಿಂಗು ಅನೇಕ ಸವಾಲುಗಳನ್ನೆದುರಿಸುತ್ತಿದೆ. ಭಾರತದಲ್ಲೂ ರಾಷ್ಟ್ರೀಕರಣದ ಅನಂತರ ಬ್ಯಾಂಕಿಂಗ್ ಕ್ಷೇತ್ರ ಎಷ್ಟರಮಟ್ಟಿಗೆ ವಿಸ್ತರಿಸಿದೆಯೆಂಬುದನ್ನೂ ಬೇರೆ ಯಾವ ದೇಶದಲ್ಲೂ ನಡೆಯದ ಎಷ್ಟೊಂದು ಪ್ರಯೋಗಗಳು ಇಲ್ಲಿ ಆಗಿವೆ—ಎಂಬುದನ್ನೂ ಕಣ್ಣಾರೆ ಕಂಡು, ಈ ಬೆಳವಣಿಗೆಯನ್ನೆಲ್ಲ ಅಂದಂದೇ ವ್ಯಾಖ್ಯಾನಿಸುವ, ಪರಿಚಯಿಸುವ, ಕನ್ನಡದಲ್ಲಿ ಇದನ್ನೆಲ್ಲ ಹೇಳುವುದು ಸಾಧ್ಯವಾಗುವಂತೆ ಭಾಷೆಗೆ ಹೊಸ ಹೊಸ ತೊಡವುಗಳನ್ನಿಡುವ ಕೆಲಸವನ್ನು 'ಬ್ಯಾಂಕಿಂಗ್ ಪ್ರಪಂಚ' ಮಾಡಿದೆ. ಪ್ರಪಂಚದ ಯಾವ ಮೂಲೆಯಲ್ಲಾಗಲಿ, ಬ್ಯಾಂಕಿಂಗ್ ವಲಯದಲ್ಲಿ ಏನು ಬೆಳವಣಿಗೆಯಾದರೂ, ಪ್ರಯೋಗವಾದರೂ ಅದನ್ನು ಆ ಕೂಡಲೇ ಕನ್ನಡದಲ್ಲಿ 'ಬ್ಯಾಂಕಿಂಗ್ ಪ್ರಪಂಚ'ದ ಮೂಲಕ ಪರಿಚಯಿಸಿಕೊಡಲಾಗುತ್ತಿದೆ. ಭಾರತದ ಬೇರೆ ಯಾವ ಭಾಷೆಯಲ್ಲೂ, ಹಿಂದಿಯಲ್ಲಿ ಕೂಡ, ಇಂಥ ಕೆಲಸ ನಡೆದಿಲ್ಲ, ಇಂಥ ಪತ್ರಿಕೆ ಬಂದಿಲ್ಲ ಎಂಬುದಾಗಿ ನಮ್ಮ ಬೆನ್ನನ್ನೇ ಚಪ್ಪರಿಸಿಕೊಂಡರೆ ಅದು ಅಕ್ಷಮ್ಯವಾದ ಅಹಂಕಾರವಾಗುತ್ತದೆಂದು ಯಾರೂ ತಿಳಿಯುವುದಿಲ್ಲವೆಂದು ನಾವು ಭಾವಿಸಿದ್ದೇವೆ.

ಆದರೆ ನಮ್ಮನ್ನೇ ನಾವು ವಿಮರ್ಶೆ ಮಾಡಿಕೊಂಡಾಗ ನಮ್ಮಲ್ಲಿ ವಿಷಾದಯೋಗವೇ ಉಂಟಾಗುತ್ತದೆ. ಅರ್ಜುನನ ವಿಷಾದಯೋಗದಿಂದ ಭಗವದ್ಗೀತೆಯೇ ಹುಟ್ಟಿಕೊಂಡಿತು. ಆದರೆ ನಮ್ಮ ವಿಷಾದಯೋಗ ನಮಗೆ ನಿರಾಶೆಯನ್ನೇ ಹೆಚ್ಚಿಸುತ್ತದೆ. ಕೆಲವರ ಟೀಕೆಯನ್ನು ನೆನಸಿಕೊಂಡಾಗ ಮನಸ್ಸು ಅಳುಕುತ್ತದೆ. 'ಬ್ಯಾಂಕಿಂಗ್ ಪ್ರಪಂಚ'ಕ್ಕಾಗಿ ದುಡಿಯುತ್ತಿದ್ದವರೆಲ್ಲ ಇಂದು ಚದರಿಹೋಗಿದ್ದಾರೆ. ಸೇವಾವೃತ್ತಿ ಅವಲಂಬಿಸಿದವರಿಗೆ ಇದು ಅನಿವಾರ್ಯ. ಆದರೆ ಹೊಸಬರು ಈ ಕೆಲಸಕ್ಕೆ ಮುಂದಾಗಿ ಬರುತ್ತಿಲ್ಲ. ಅಂದು ಕಪ್ಪು ಕುರುಳಿನ ಕನಸುಗಣ್ಣಿನ ತರುಣರಾಗಿದ್ದ ಕೆಲಸಗಾರರು ಇಂದು ನರೆ ಬೆರೆತ, ಸುಕ್ಕುಗೆನ್ನೆಯ ವಿಷಾದಯೋಗಿಗಳಾಗಿದ್ದಾರೆ. ಅವರ ಉತ್ಸಾಹವೇನೂ ಕುಂದಿಲ್ಲ. ಆದರೆ ಅನೇಕ ಭೌತಿಕ ಅಡಚಣೆಗಳು ಸುತ್ತಿಕೊಂಡಿವೆ. ಮತ್ತೆ ಅವರೆಲ್ಲರನ್ನೂ ತಬ್ಬಿ ಹಿಡಿದು, ತೋಳತೆಕ್ಕೆಗೆ ಹೊಸಬರನ್ನು ಸೇರಿಸಿಕೊಳ್ಳುವ ಕೆಲಸ ಸುಲಭವಲ್ಲ. ಅಸಾಧ್ಯವೇಯೋ ಏನೋ !

'ಬ್ಯಾಂಕಿಂಗ್ ಪ್ರಪಂಚ' ಜನಪ್ರಿಯ ಏಕಾಗಿಲ್ಲ ? ಇದರ ಲೇಖನಗಳನ್ನು ಓದಬಲ್ಲವರು ಎಷ್ಟು ಜನ ? ಸಾಮಾನ್ಯಜನರಿಗೆ ಬ್ಯಾಂಕಿಂಗ್ ವಿಷಯ ತಿಳಿಯಹೇಳುವ ಲೇಖನಗಳು ಏಕೆ ಹೆಚ್ಚಾಗಿ ಇಲ್ಲ ? ಎಂಬ ಪ್ರಶ್ನೆಗಳೂ ಇವೆ. ಇವಕ್ಕೆ ಒಂದೇ ಉತ್ತರವೆಂದರೆ, 'ಬ್ಯಾಂಕಿಂಗ್ ಪ್ರಪಂಚ'ವನ್ನು ಒಂದು ಜನಪ್ರಿಯಪತ್ರಿಕೆಯಾಗಿ ಮಾಡಬೇಕೆಂಬುದು ಎಂದೂ ಉದ್ದೇಶವಾಗಿರಲಿಲ್ಲ. ಹೀಗೆಂದರೆ ಅನೇಕರು ಹುಬ್ಬೇರಿಸಿಯಾರು. ಕನ್ನಡದಲ್ಲಿ ಇದುವರೆಗೂ ಅಭಿವ್ಯಕ್ತವಾಗದ ವಿಚಾರಗಳಿಗೆ ಮೂರ್ತರೂಪ ಕೊಡಲು ಹೊರಟ ಪತ್ರಿಕೆ ಇದು. ಜನಪ್ರಿಯಲೇಖನಗಳನ್ನು ಬರೆಯಲು ಒದಗಿಬರುವ ಸಾಮಗ್ರಿ ಇಲ್ಲಿ ಧಾರಾಳವಾಗಿ ಉಂಟು. ಅದಕ್ಕೆ ಹಿಂದಿನ ಮೆಟ್ಟಿಲು ಇದು. ಇದು ಸಿದ್ಧವಾಗದೆ ಮುಂದಿನದು ಆಗದು. ಯಾವುದೇ ಶಾಸ್ತ್ರದ ವಿಚಾರದಲ್ಲೂ ಈ ಮಾತು ನಿಜ. ಒಂದು ಪತ್ರಿಕೆಯ ಪ್ರಸಾರಸಂಖ್ಯೆಯಿಂದ ಅದರ ಪ್ರಭಾವವನ್ನಳೆಯುವ ಯತ್ನ ಸಲ್ಲದು. ಹೆಚ್ಚು ಪ್ರಸಾರವಿಲ್ಲದ ಪತ್ರಿಕೆಗಳೇ ಜನಾಭಿಪ್ರಾಯವನ್ನು ರೂಪಿಸುತ್ತ ಬಂದಿರುವುದು ಇತಿಹಾಸದ ಸಂಗತಿ. ನಿದರ್ಶನಗಳನ್ನು ಕೊಡಲು ಇಲ್ಲಿ ಯತ್ನಿಸುವುದಿಲ್ಲ. 'ಬ್ಯಾಂಕಿಂಗ್ ಪ್ರಪಂಚ' ಅಂಥ ಕೆಲಸ ಮಾಡಿರುವುದಾಗಿ ಹೇಳಿಕೊಳ್ಳುವುದಿಲ್ಲ. ಏಕೆಂದರೆ ಇದರ ವಿಸ್ತಾರವೇ ಕಿರಿದು. ಆದರೆ ಹಣ ಬ್ಯಾಂಕಿಂಗ್ ಕುರಿತ ವಿಪುಲ ಸಾಹಿತ್ಯ ಸೃಷ್ಟಿ ಮಾಡಿ, ಅಷ್ಟರಮಟ್ಟಿಗೆ ಕನ್ನಡಕ್ಕೆ ಒಂದು ಆಯಾಮ ನೀಡುವ ಕೆಲಸವನ್ನಂತೂ ಈ ಪತ್ರಿಕೆ ಮಾಡಿದೆಯೆಂದು ವಿನಯದಿಂದ ಹೇಳಿಕೊಳ್ಳಬಹುದು.

ಆದರೆ ಈಗೀಗ ದಾರಿ ನಡೆದ ಶ್ರಮದ ಅನುಭವವಾಗುತ್ತಿದೆ. ಹೆಚ್ಚು ಜನ ಕೂಡಿಕೊಳ್ಳದಿರುವುದು ಒಂದು ಕಾರಣ. ಹೆಚ್ಚು ಮಂದಿ ಇದರಲ್ಲಿ ಆಸಕ್ತಿ ತಳೆದಾಗ, ಇದರೊಂದಿಗೆ ಸಂವಾದದಲ್ಲಿ ನಿರತರಾದಾಗ, ರಚನಾತ್ಮಕ ವಿಮರ್ಶೆ ಮಾಡಿದಾಗ, ಪತ್ರಿಕೆಯ ಉಸಿರಾಟ ಚುರುಕಾಗುತ್ತದೆ. ಹದಿನೈದನೆಯ ವರ್ಷದಲ್ಲಿ ಇದಕ್ಕಾಗಿ ಕಾಯುತ್ತಿದ್ದೇವೆ.

– ಸಂಪಾದಕ

# ರಾಜಿಯ ಮೂಲಕ ಕ್ಲಿಷ್ಟ ಸಾಲಗಳ ವಸೂಲಿ

ಎ. ಅರುಣಾ
ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ವಸೂಲಾತಿ ಕೋಶ, ಮುಖ್ಯ ಕಛೇರಿ, ಬೆಂಗಳೂರು-9

**ಸಮಾಜದಲ್ಲಿಯ ವ್ಯಕ್ತಿಗಳ ಅಗತ್ಯಗಳಿಗೆ ಸ್ಪಂದಿಸಿ ಸಾಲ ನೀಡಲು ಸ್ನೇಹದಿಂದ ಮುಂದೆ ಬರುವ ಬ್ಯಾಂಕುಗಳು ಅದೇ ಭಾವದಿಂದ ವಸೂಲಿ ಮಾಡಿಕೊಳ್ಳುವುದು ಉತ್ತಮ. ಕ್ಲಿಷ್ಟಕರ ಆಸ್ತಿಗಳ ಹಿನ್ನೆಲೆಯಲ್ಲಿ ರಾಜಿಯ ಮುಖಾಂತರ ಸಾಲ ಇತ್ಯರ್ಥಕ್ಕೆ ಬ್ಯಾಂಕುಗಳು ತ್ವರಿತಗತಿಯಲ್ಲಿ ಕಾರ್ಯೋನ್ಮುಖವಾಗಬೇಕಿದೆ.**

ವಸೂಲಾಗಬಹುದಾದ ಮೌಲ್ಯಕ್ಕೆ ಅನುಗುಣವಾಗಿ ಬ್ಯಾಂಕುಗಳ ಆಸ್ತಿಗಳನ್ನು ವರ್ಗೀಕರಿಸುವ ಬಗ್ಗೆ ನರಸಿಂಹಂ ಸಮಿತಿ ಏಕರೀತಿಯ ಲೆಕ್ಕ ವಿಧಾನವನ್ನು ಸೂಚಿಸಿದೆ. ಆದಾಯ ಗುರುತಿಸುವಿಕೆ, ಆಸ್ತಿವರ್ಗೀಕರಣ ಮತ್ತು ಉಪಬಂಧಗಳ ವ್ಯವಸ್ಥೆಯನ್ನು ಇದು ಒಳಗೊಳ್ಳುತ್ತದೆ. ಇವುಗಳು ಬ್ಯಾಂಕಿನ ಲಾಭಪ್ರದತೆಯ ಮೇಲೂ ನೇರ ಪರಿಣಾಮ ಬೀರಬಲ್ಲವು.

ಭಾರತೀಯ ರಿಸರ್ವ್ ಬ್ಯಾಂಕಿನ ಹೊಸ ನಿಯಮಗಳ ಪ್ರಕಾರ ಆಸ್ತಿಗಳನ್ನು ಪ್ರಮುಖವಾಗಿ ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. (1) ಕ್ರಿಯಾತ್ಮಕ ಆಸ್ತಿಗಳು, (2) ನಿಷ್ಕ್ರಿಯ ಆಸ್ತಿಗಳು. ಯಾವ ಖಾತೆಯಲ್ಲಿ ಖಣಿಸಿದ ನಾಲ್ಕು ತ್ರೈಮಾಸಿಕ ಅವಧಿಗಳ ಬಡ್ಡಿ-ವಸೂಲಾಗಿಲ್ಲವೊ ಅಂಥ ಖಾತೆಗಳನ್ನು ನಿಷ್ಕ್ರಿಯ ಆಸ್ತಿಗಳೆಂದು ವರ್ಗೀಕರಿಸಲಾಗಿದೆ. ನಿಷ್ಕ್ರಿಯ ಆಸ್ತಿಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ (1) ಶಿಷ್ಟ ಆಸ್ತಿಗಳು, (2) ಅರೆಶಿಷ್ಟ ಆಸ್ತಿಗಳು, (3) ಅನುಮಾನಾಸ್ಪದ ಆಸ್ತಿಗಳು ಹಾಗೂ (4) ನಷ್ಟ ಸಂಭಾವ್ಯ ಆಸ್ತಿಗಳು. ಇವುಗಳು ಬ್ಯಾಂಕಿನ ಆಸ್ತಿ ಹೊಣೆ ಪಟ್ಟಿಯಲ್ಲಿ ಬ್ಯಾಂಕಿನ ನಿಜವಾದ ಸ್ವಾಸ್ಥ್ಯವನ್ನು ಬಿಂಬಿಸುತ್ತವೆ. ಈ ನಿಷ್ಕ್ರಿಯ ಆಸ್ತಿಗಳು ಸಂಪನ್ಮೂಲವನ್ನು ಬೇರೆಡೆಗೆ ಉಪಯೋಗಿಸುವುದಕ್ಕೆ ಒದಗಿಬರದಿರುವುದೇ ಅಲ್ಲದೆ ಬ್ಯಾಂಕಿನ ಲಾಭಪ್ರದತೆಯ ಮೇಲೆ ತೀವ್ರ ಪರಿಣಾಮ ಬೀರುತ್ತವೆ. ಒಟ್ಟು ಲಾಭದಲ್ಲಿ ಪ್ರಮುಖ ಭಾಗ ಕರಡು ಹಾಗೂ ಸಂಶಯಾಸ್ಪದ ಸಾಲಗಳಿಗೆ ಉಪಬಂಧವನ್ನು ಕಲ್ಪಿಸುವುದರಲ್ಲೇ ವ್ಯಯವಾಗುತ್ತವೆ. ಆದ್ದರಿಂದ ಈ ಆಸ್ತಿಗಳನ್ನು ಗಣನೀಯವಾಗಿ ಕಡಿಮೆ ಮಾಡಲು ಎಲ್ಲಾ ನಿಟ್ಟುಗಳಿಂದಲೂ ತೀವ್ರತರ ಪ್ರಯತ್ನಗಳ ಆವಶ್ಯಕತೆಯಿದೆ. ಶೀಘ್ರವಾಗಿ ಸಾಲ ವಸೂಲಾತಿ ಮಾಡುವುದರಿಂದ, ಇವುಗಳನ್ನು ಸಾಧಿಸಬಹುದು. ಈ ಹಂತದಲ್ಲಿ ಬ್ಯಾಂಕಿನವರು ಸಾಲಗಾರನಿಂದ ಆದಷ್ಟು ಬೇಗ ನಾನಾ ಉಪಾಯಗಳಿಂದ/ಕ್ರಮಗಳಿಂದ ಸಾಲ ಹಾಗೂ ಬಡ್ಡಿ ವಸೂಲಿಯ ಮೇಲೆ ಗಮನವಿಟ್ಟಿರುತ್ತಾರೆ. **ರಾಜಿ ಮೂಲಕ ಇತ್ಯರ್ಥ ಮಾಡುವ ಸಾಲ** ಅಂತಹ ಕ್ರಮಗಳಲ್ಲೊಂದಾಗಿದೆ. ನಿಷ್ಕ್ರಿಯ ಆಸ್ತಿಗಳನ್ನು ಗಣನೀಯವಾಗಿ ಕಡಿಮೆ ಮಾಡುವಲ್ಲಿ ರಾಜಿ ಇತ್ಯರ್ಥಗಳು ಪ್ರಮುಖ ಪಾತ್ರ ವಹಿಸಿವೆ.

ರಾಜಿ ಎಂದರೆ ಸುಮ್ಮನೆ ಯಾವುದೋ ಒಂದು ಪ್ರಸ್ತಾವನೆಯನ್ನು ಒಪ್ಪಿಕೊಳ್ಳುವುದು ಎಂದರ್ಥವಲ್ಲ. ಅದನ್ನು ಸಾಲಗಾರರೊಡನೆ ಚರ್ಚಿಸಿ, ಒಂದು ಒಪ್ಪಂದಕ್ಕೆ ಬರುವಲ್ಲಿ ಬ್ಯಾಂಕು ಸಕಲ ಶಕ್ತಿಯನ್ನೂ ವ್ಯಯಿಸಬೇಕಾಗಿದೆ. ಈ ಕಾರ್ಯ ವಿಧಾನದಲ್ಲಿ, ಸಾಲಗಾರನ ಒಟ್ಟು ಸಾಲದ ಮೊತ್ತಕ್ಕೆ ತುಲನೆ ಮಾಡಿದರೆ, ಬಡ್ಡಿಯನ್ನು, ಮಾಡುವ ಹಾಗೂ ಖರ್ಚು ಹಾಕದ ಬಡ್ಡಿಯ ಅಥವಾ ಖಣಿಸದ ಬಡ್ಡಿಯ ರೂಪದಲ್ಲಿ, ನಿರ್ದಿಷ್ಟ ಮೊತ್ತವನ್ನು ಬ್ಯಾಂಕು ತ್ಯಾಗ ಮಾಡಬೇಕಾಗುತ್ತದೆ. ಇದು ಬ್ಯಾಂಕಿನ ಆದಾಯಕ್ಕೆ ನಷ್ಟವನ್ನುಂಟುಮಾಡುವುದಾಗಿದೆ. ರಾಜಿ ಇತ್ಯರ್ಥದ ಮೂಲಕ ತೀರ್ಮಾನವಾದ ಪ್ರಕರಣಗಳಲ್ಲಿ ಬ್ಯಾಂಕು ಎಷ್ಟರಮಟ್ಟಿನ ಲಾಭವನ್ನು ಬಿಟ್ಟುಕೊಡಬೇಕು ಎನ್ನುವುದು ಪ್ರತಿಯೊಂದು ಪ್ರಕರಣದಲ್ಲೂ ಬೇರೆಬೇರೆಯಾಗಿರುತ್ತದೆ. ಇದಕ್ಕಾಗಿ ತ್ಯಾಗದ ಹಣವು ಇಂತಿಷ್ಟೇ ಇರಬೇಕೆಂಬುದು ನಿರ್ಧಾರಿತವಾಗಿಲ್ಲ.

### ರಾಜಿ ಪ್ರಸ್ತಾವ ಯಾವಾಗ?

ಈ ಕೆಳಗಿನ ಪರಿಸ್ಥಿತಿಗಳಲ್ಲಿ ರಾಜಿ ಪ್ರಸ್ತಾವನೆಯನ್ನು ಪರಿಗಣಿಸಬಹುದಾಗಿದೆ:

1 ಜಾಮೀನು ಅಥವಾ ಆಧಾರಗಳು ಇಲ್ಲದಿರುವಾಗ ಅಥವಾ ಕಡಿಮೆ ಆಧಾರಗಳು ಇರುವಾಗ,

2 ಜಾಮೀನುದಾರ ಅಥವಾ ಸಾಲಗಾರನ ಆಸ್ತಿಯ ನಿವ್ವಳ ಮೌಲ್ಯ ಕಡಿಮೆ ಇದ್ದಾಗ,

3 ತೋರಾಧಾರ ದಸ್ತಾವೇಜುಗಳಲ್ಲಿ ದೋಷಗಳಿದ್ದಾಗ.

4 ನ್ಯಾಯಾಲಯದ ತೀರ್ಪನ್ನು ನಿಧಾನಗೊಳಿಸುವಂತಹ ಕಾನೂನು ತೊಡಕುಗಳು ಇದ್ದಾಗ,

5 ನಿಧಾನಮಾಡುವುದರಿಂದ ಆಧಾರಗಳು ಕ್ಷೀಣಿಸುವ ಸಂದರ್ಭವಿದ್ದರೆ, ಉದಾ: ಯಂತ್ರೋಪಕರಣಗಳು,

6 ಸಾಲಗಾರ ಮರಣ ಹೊಂದಿ, ಅವನ ವಾರಸುದಾರರು ಅಥವಾ ಜಾಮೀನುದಾರರು ಒಪ್ಪಂದಕ್ಕೆ ಬಂದಿದ್ದರೆ,

7 ಅನಿವಾರ್ಯ ಪರಿಸ್ಥಿತಿಗಳಿಂದ ಸಾಲಗಾರ ನಷ್ಟ ಹೊಂದಿದ್ದರೆ,

8 ಸಾಲಗಾರ ಸಾಲ ತೀರಿಸಲು ಶಕ್ತನಿದ್ದರೂ, ಉದ್ದೇಶಪೂರ್ವಕ ಸುಸ್ತಿದಾರನಾದಾಗ—ಕ್ಲಿಷ್ಟ ಸಾಲಗಳನ್ನು ಬಗೆಹರಿಸಲು ರಾಜಿ ಒಪ್ಪಂದ ಸೂಕ್ತ ಮಾರ್ಗ.

### ಗಮನಿಸಬೇಕಾದ ಅಂಶಗಳು

ರಾಜಿ ಇತ್ಯರ್ಥಗಳಲ್ಲಿ ಗಮನಿಸಬೇಕಾದ ಮುಖ್ಯಅಂಶಗಳೆಂದರೆ :

(i) ರಾಜಿ ಒಪ್ಪಂದಕ್ಕೆ ಬಂದಿರುವ ಘಟಕ/ವ್ಯವಹಾರ ನಷ್ಟದಲ್ಲಿ ನಡೆಯುತ್ತಿದೆಯೇ ಅಥವಾ ಲಾಭದಲ್ಲಿ ನಡೆಯುತ್ತಿದೆಯೇ ಎಂಬುದು.

(ii) ಕಾನೂನು ಕ್ರಮ ಕೈಗೊಂಡರೆ ಆಗುವ ಪರಿಣಾಮಗಳು ; ಅಥವಾ ಒಪ್ಪಂದದಿಂದ ಆಗುವ ಲಾಭ.

ಈ ತೀರ್ಮಾನದಲ್ಲಿ, ಸಾಲಗಾರನ ಶಕ್ತ್ಯನುಸಾರ ಒಟ್ಟಾಗಿ ಅಥವಾ ಕಂತಿನಲ್ಲಿ ಹಣ ಕೊಡಲು ಗೊತ್ತುಮಾಡಬಹುದು. ಕೆಲವೊಮ್ಮೆ ಸಾಲಗಾರ ಖುದ್ದಾಗಿ ಸಾಲ ತೀರಿಸಲು ನಿವೇದಿಸಿ, ಬ್ಯಾಂಕಿನಿಂದ ಸ್ವಲ್ಪ ಪರಿಹಾರ ಕೇಳಿರುವ ಉದಾಹರಣೆಗಳಿವೆ. ಒಮ್ಮೆ ಸ್ವಲ್ಪ ಹಣವನ್ನು ಕೊಟ್ಟು ಉಳಿದ ಮೊತ್ತಕ್ಕೆ ಬಡ್ಡಿ ರಿಯಾಯ್ತಿತಿ ಕೇಳಬಹುದು ಅಥವಾ ಕಾನೂನು ಖರ್ಚುಗಳನ್ನು ಕಡಿಮೆ ಮಾಡಬಹುದು. ಈ ತರಹದ ಪ್ರಕರಣಗಳಲ್ಲಿ ಬ್ಯಾಂಕ್ ರಾಜಿ ಒಪ್ಪಂದಗಳನ್ನು ಅನುಸರಿಸುವಲ್ಲಿ ಹಾಗೂ ಹೆಚ್ಚು ವಸೂಲಾತಿಯನ್ನು ಮಾಡುವಲ್ಲಿ ಒಲವು ತೋರಬೇಕಾಗುವುದು. ಆದರೆ ಸಾಲಗಾರನಲ್ಲಿ ಬ್ಯಾಂಕ್ ಸಾಲಕ್ಕಿಂತ ಹೆಚ್ಚಿನ ಆಸ್ತಿ, ಆಧಾರಗಳು ಇದ್ದು, ಆತ ಬ್ಯಾಂಕ್ ಸಾಲ ತೀರಿಸಲು ಶಕ್ತನಿದ್ದೂ ಬಡ್ಡಿಯನ್ನು (ರಿಯಾಯಿತಿ) ಬಿಟ್ಟುಕೊಡಲು ಕೇಳುತ್ತಿದ್ದರೆ, ರಾಜಿ ಒಪ್ಪಂದದ ಬದಲು ಕಾನೂನುಕ್ರಮ ಜರುಗಿಸುವುದು ಹೆಚ್ಚು ಸೂಕ್ತ ಅಥವಾ ಇಂಥ ಸಂದರ್ಭದಲ್ಲಿ ಚಕ್ರಬಡ್ಡಿ ಅಥವಾ ಸಾಮಾನ್ಯ ಬಡ್ಡಿಗಳ ವ್ಯತ್ಯಾಸವನ್ನು ಗಣನೆಗೆ ತಂದುಕೊಳ್ಳದೆ ರಾಜಿ ಮಾಡಿಕೊಳ್ಳಬೇಕು.

ಠೇವಣಿ ವಿಮೆ ಹಾಗೂ ಉದರಿ ಖಾತರಿ ನಿಗಮದಿಂದ ಬಂದಿರತಕ್ಕ ಕ್ಲೇಮುಗಳು ಅಥವಾ ಬರಬಹುದಾದ ಕ್ಲೇಮುಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕು. ರಾಜಿಗೆ ಮೊದಲೆ ಕ್ಲೇಮ್ ಹಣ ಬಂದಿದ್ದರೆ, ಆ ಭಾಗಕ್ಕೆ ಅನುಗುಣವಾಗಿ ಹಣವನ್ನು ಠೇವಣಿ ವಿಮೆ ಮತ್ತು ಉದರಿ ಖಾತರಿ ನಿಗಮ ವಾಪಸ್ಸು ಮಾಡಬೇಕಾಗುತ್ತದೆ.

ರಾಜಿ ಪ್ರಸ್ತಾವನೆಯನ್ನು ನಿಷ್ಕ್ರಿಯ ಆಸ್ತಿಯಲ್ಲಿ ಅದರಲ್ಲೂ ಸಂಶಯಾಸ್ಪದ ಹಾಗೂ ನಷ್ಟ ಆಸ್ತಿಗಳಲ್ಲಿ ಮಾತ್ರ ಪರಿಗಣಿಸಲಾಗುತ್ತದೆ. ಎಲ್ಲಾ ತರಹದ ಪ್ರಯತ್ನಗಳು ಅಂದರೆ ಮರು ಅವಧಿ ನಿರ್ಮಾಣ, ಪುನಸ್ಥಾಪನ, ನವೀಕರಣ ಇತ್ಯಾದಿಗಳು, ನಿಷ್ಫಲವಾಗಿ ವಸೂಲಾತಿಗೆ ಇನ್ಯಾವ ಮಾರ್ಗವೂ ಇಲ್ಲದಿದ್ದಾಗ, ಅರೆಶಿಷ್ಟ ಆಸ್ತಿಗಳನ್ನು ಕೂಡ ಪರಿಗಣಿಸಬಹುದು.

### ಸಾಧಕ ಬಾಧಕ ವಿಶ್ಲೇಷಣೆ

ಈ ಮೇಲಿನ ಎಲ್ಲಾ ಅಂಶಗಳ ಅನಂತರ ರಾಜಿ ಒಪ್ಪಂದದ ಸಾಧಕ ಬಾಧಕಗಳನ್ನು ಪರಿಶೀಲಿಸಿ, ಈ ಕೆಳಗಿನಂತೆ ವಿಶ್ಲೇಷಿಸಬಹುದು:

(ಅ) ರಾಜಿ ಇತ್ಯರ್ಥದಿಂದ ಬ್ಯಾಂಕಿಗೆ ಆಗುವ ನಷ್ಟದ ಪರಿಮಾಣ,

(ಆ) ರಾಜಿ ಇತ್ಯರ್ಥ ಆಗದಿದ್ದರೆ ಬ್ಯಾಂಕಿಗೆ ಆಗುವ ನಷ್ಟದ ಪರಿಮಾಣ.

ರಾಜಿ ಹಣವನ್ನು ಬ್ಯಾಂಕಿಗೆ ಜಮಾ ಮಾಡಲು. ಸಾಲಗಾರರೊಡನೆ ಚರ್ಚಿಸಿ, ನಿಗದಿತ ದಿನಾಂಕವೊಂದನ್ನು ಸೂಚಿಸಬೇಕು. ಒಂದು ವೇಳೆ ಸಾಲಗಾರ ನಿರ್ದಿಷ್ಟ ದಿನಾಂಕದಂದು ಹಣ ಕಟ್ಟದಿದ್ದಲ್ಲಿ, ಆ ಹಣಕ್ಕೆ ಬಡ್ಡಿಯನ್ನು ಕೊಡುವಂತೆ ಆದೇಶ ಕೊಡಬೇಕು. ಆಗ ಸಾಲಗಾರರು ಬೇಗನೆ ರಾಜಿ ಹಣ ಕಟ್ಟಲು ಆಸಕ್ತಿ ತೋರುತ್ತಾರೆ.

ಸಾಲಗಾರನ ಮೇಲೆ ಸಾಲ ವಸೂಲಿಗಾಗಿ ಈಗಾಗಲೇ ಮೊಕದ್ದಮೆ ಹೂಡಿದ್ದರೆ, ರಾಜಿಯನ್ನು ರಾಜಿ ಡಿಕ್ರಿಯ ಮೂಲಕವೇ ಬಗೆಹರಿಸಿಕೊಳ್ಳುವುದು ಒಳ್ಳೆಯದು. ಹೀಗೆ ಮಾಡುವುದರಿಂದ ಸಾಲಗಾರನನ್ನು ಈ ನಿರ್ಧಾರದ ಚೌಕಟ್ಟಿನೊಳಗೆ ಬಂಧಿಸಿದಂತೆ ಆಗುತ್ತದೆ. ಅಲ್ಲದೆ ಇದಕ್ಕೆ ತಪ್ಪಿದಲ್ಲಿ ಡಿಕ್ರಿಯನ್ನು ಜಾರಿಮಾಡಬಹುದಾಗಿದೆ. ರಾಜಿ ಬಯಸುವ ಸಾಲಗಾರರ ಖಾತೆ ಅನಾದರಣೆಯಾಗಿ ಪ್ರಮಾಣಿತ ಹುಂಡಿಗೆ ಪರಿವರ್ತನೀಯವಾಗದೆ, ಇನ್ನೂ ಕಾರ್ಯನಿರ್ವಹಿಸುವ (operative) ಖಾತೆಯಾಗಿಯೇ ಇದ್ದರೆ, ಆ ಖಾತೆಯನ್ನು ಆದಷ್ಟು ಬೇಗ **ಸಕ್ಷಮ** ಪ್ರಾಧಿಕಾರದಿಂದ ಅದನ್ನು ಪ್ರಮಾಣಿತ ಹುಂಡಿಯಾಗಿ ಪರಿವರ್ತಿಸಲು ಅನುಮತಿ ಪಡೆಯುವುದು ಅಗತ್ಯ. ಇಲ್ಲದಿದ್ದರೆ ಆ ಖಾತೆಗೆ ಬಡ್ಡಿ ವಿಧಿಸುವುದನ್ನು ಮುಂದುವರಿಸಬೇಕಾಗಿ ಬರುತ್ತದಲ್ಲದೆ, ಅದು ಬ್ಯಾಂಕಿನ ಸಂಪಾದನೆಯ ಮೇಲೂ ಪರಿಣಾಮ ಬೀರುತ್ತದೆ. ಹಾಗೂ ತ್ಯಾಗ ಅಥವಾ ಖಾತೆದಾರನ ರಿಯಾಯಿತಿಯ ಮೊತ್ತವೂ ಬದಲಾಗುತ್ತದೆ.

### ಬ್ಯಾಂಕಿಗೆ ಅನುಕೂಲಗಳು

ರಾಜಿ ಇತ್ಯರ್ಥದಿಂದ ಬ್ಯಾಂಕಿಗೆ ಅನೇಕ ಅನುಕೂಲಗಳಿವೆ :

(i) ನಷ್ಟದ ಆಸ್ತಿಯಲ್ಲಿ ವಸೂಲಾದ ಮೊತ್ತಕ್ಕೆ ಸಮನಾಗಿ ಮುನ್ನೇರ್ಪಾಟು ಬಿಡುಗಡೆಯಾಗುತ್ತದೆ. ಸಂಶಯಾಸ್ಪದ ಆಸ್ತಿಯಲ್ಲಿ ಈಗಾಗಲೇ ಇಟ್ಟಿರುವ ಮುನ್ನೇರ್ಪಾಟು ಬಿಡುಗಡೆಯಾಗುವುದರ ಜೊತೆಗೆ, ಮುಂದೆ ಇಡಬಹುದಾದಂಥ ಮುನ್ನೇರ್ಪಾಟನ್ನು ಕೂಡ ತೆಗೆದುಹಾಕಬಹುದು.

(ii) ಹೆಚ್ಚಿನ ರಾಜಿ ತೀರ್ಪುಗಳಲ್ಲಿ ಖಣಿಸಿದ ಬಡ್ಡಿಯೂ ಬರುವ ಸಾಧ್ಯತೆಗಳಿರುವುದರಿಂದ, ಬ್ಯಾಂಕಿನ ಲಾಭ ಹೆಚ್ಚಾಗುತ್ತದೆ. ಈ ರೀತಿ ಉತ್ಪಾದಿಸಿದ ಮೊತ್ತವನ್ನು ಅಥವಾ ವಸೂಲಾದ ಹಣವನ್ನು ಲಾಭಪ್ರದವಾಗಿ ಪುನರುತ್ಪಾದನೆಗೆ ಬಳಸಿ, ಹೆಚ್ಚಿನ ಉತ್ಪತ್ತಿಯನ್ನು ಪಡೆಯಬಹುದು.

(iii) ಸ್ವಲ್ಪವೇ ತ್ಯಾಗದಿಂದ, ರಾಜಿ ಮುಖಾಂತರ, ಹೀಗೆ ಉಳಿಸಿದ ಹಣವಷ್ಟೇ ಅಲ್ಲ—ಮಾನವಶಕ್ತಿ ಮತ್ತು ಸಮಯವನ್ನು ಕೂಡ ಲಾಭಪ್ರದವಾಗಿ ಬಹೂಪಯೋಗಿ ಕಾರ್ಯಗಳಿಗೆ ಹಾಗೂ ಇತರ ಆಸ್ತಿಗಳ ಗುಣವನ್ನು ಹೆಚ್ಚಿಸುವುದಕ್ಕಾಗಿ ಉಪಯೋಗಿಸಬಹುದು.

ಒಟ್ಟಿನಲ್ಲಿ ಬ್ಯಾಂಕಿನ ಲಾಭಪ್ರದತೆ, ಜನಸಮುದಾಯಕ್ಕೆ ಸೇವೆ —ಈ ಎರಡೂ ಅಂಶಗಳಿಗೆ ಹೆಚ್ಚಿನ ಮಹತ್ತ್ವ ನೀಡಬೇಕು. ಸಮಾಜದಲ್ಲಿನ ವ್ಯಕ್ತಿಗಳ ಅಗತ್ಯಗಳಿಗೆ ಸ್ಪಂದಿಸಿ ಸಾಲ ನೀಡಲು ಸ್ನೇಹದಿಂದ ಮುಂದಾಗುವ ಬ್ಯಾಂಕುಗಳು, ಅದೇ ಭಾವದಿಂದ ವಸೂಲಾತಿಯನ್ನು ಮಾಡಿಕೊಳ್ಳುವುದು ಉತ್ತಮ. ಕೋರ್ಟು, ಕಛೇರಿಗಳ ಮೂಲಕವೇ ವಸೂಲಾತಿಗೆ ಹೋಗಬೇಕಾದ ಅನಿವಾರ್ಯತೆ ಇದ್ದಾಗ ಬೇರೆ ಮಾರ್ಗವಿಲ್ಲ. ಆದರೆ ಉಳಿದ ಸಂದರ್ಭಗಳಲ್ಲಿ ಸಹೃದಯತೆಗೆ ಪಟ್ಟಕಟ್ಟಿ ರಾಜಿ ಸೂತ್ರವನ್ನೇ ಅಳವಡಿಸುವುದು ಅತ್ಯಂತ ಸೂಕ್ತ. ಆದ್ದರಿಂದ ಕ್ಲಿಷ್ಟಕರ ಆಸ್ತಿಗಳ ಹಿನ್ನೆಲೆಯಲ್ಲಿ, ರಾಜಿಗಳ ಮುಖಾಂತರ ಬಗೆಹರಿಸುವುದಕ್ಕೆ ಬ್ಯಾಂಕುಗಳು ತ್ವರಿತಗತಿಯಲ್ಲಿ ಕಾರ್ಯೋನ್ಮುಖವಾಗಬೇಕಿದೆ. ಹಾಗೂ ಬಂಡವಾಳ ಪರ್ಯಾಪ್ತತೆಯು ನಿಯಮಗಳಿಗನುಸಾರ ಅಪೇಕ್ಷಿತ ಮಟ್ಟದ ಲಾಭವನ್ನು ಹೆಚ್ಚಿಸುವುದು ಅನಿವಾರ್ಯವಾಗಿದೆ. ●




## ನಮೂನೆ IV

### ಪತ್ರಿಕೆಯ ಒಡೆತನ ಮತ್ತು ಇತರ ವಿವರಗಳನ್ನು ಕುರಿತ ಹೇಳಿಕೆ

### ಪತ್ರಿಕೆಗಳ ನೋಂದಣಿ ಕುರಿತ (ಕೇಂದ್ರದ) ನಿಯಮಾವಳಿಯ ನಿಯಮ 8ರಂತೆ

ಪತ್ರಿಕೆಯ ಹೆಸರು : ಬ್ಯಾಂಕಿಂಗ್ ಪ್ರಪಂಚ

ಪ್ರಕಟಣೆಯ ಸ್ಥಳ : ಬೆಂಗಳೂರು 560 002

ಪ್ರಕಟಣೆಯ ಅವಧಿ : ತ್ರೈಮಾಸಿಕ

ಮುದ್ರಕರು: ಜಿ. ಎಚ್. ಕೃಷ್ಣಮೂರ್ತಿ (ಭಾರತೀಯ), ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಗಡಿಯಾರ ಚೌಕ, ಮೈಸೂರು 570 001

ಪ್ರಕಾಶಕರು : ಪಾ. ರಾಜಗೋಪಾಲ (ಭಾರತೀಯ), ಪ್ರಧಾನ ಕಾರ್ಯದರ್ಶಿ, ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿ (ನೋಂ), 22 ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು 560 002

ಸಂಪಾದಕರು: ಎಚ್ಚೆಸ್ಕೆ (ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್, ಭಾರತೀಯ), 41 ಆರನೆಯ ಮುಖ್ಯ ರಸ್ತೆ, ಸರಸ್ವತೀಪುರಂ, ಮೈಸೂರು 570 009

ಪತ್ರಿಕೆಯ ಒಡೆತನ : ಸಮನ್ವಯ ಸಮಿತಿ (ನೋಂ), ಭಾರತೀಯ ಸ್ಟೇಟ್‌ಬ್ಯಾಂಕ್ ಕನ್ನಡ ಸಂಘಗಳು, 22 ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು 560 002

ಮೇಲೆ ನೀಡಿರುವ ವಿವರಗಳು ನನ್ನ ಸಾಧ್ಯವಾದಮಟ್ಟಿಗಿನ ತಿಳಿವಳಿಕೆ ಮತ್ತು ನಂಬಿಕೆಯ ಪ್ರಕಾರ ಸತ್ಯವಾಗಿವೆಯೆಂದು ನಾನು, ಪಾ. ರಾಜಗೋಪಾಲ, ಈ ಮೂಲಕ ಘೋಷಿಸುತ್ತೇನೆ.

ಪಾ. ರಾಜಗೋಪಾಲ
ಪ್ರಕಾಶಕ

# ಕೇಂದ್ರ ಆಯವ್ಯಯ: ಶ್ರೀಸಾಮಾನ್ಯನ ದೃಷ್ಟಿಯಲ್ಲಿ

**ನಾಗಪತಿ ಭಟ್ಟ**

ಭಾರತೀಯ ಸ್ಟೇಟ್ ಬ್ಯಾಂಕ್, ಮಾಗಡಿ ರಸ್ತೆ ಶಾಖೆ, ಬೆಂಗಳೂರು–560073

**ವರ್ಷಕ್ಕೊಮ್ಮೆ ಸರ್ಕಾರ ಮಂಡಿಸಲೇಬೇಕಾದ ಬಜೆಟ್ ದೇಶದ ಆರ್ಥಿಕ ಸ್ಥಿತಿಗತಿಗಳ ದಿಕ್ಕುದೆಸೆಗಳನ್ನು ಸೂಚಿಸುತ್ತದೆ. ಬಜೆಟ್ ಮಂಡನೆಯಾದೊಡನೆ ಪ್ರತಿಯೊಬ್ಬರೂ ಅದರಿಂದ ತಮಗೇನು ಅನುಕೂಲ ಅಥವಾ ತೊಂದರೆ ಎಂಬುದನ್ನು ಕುರಿತು ವಿಚಾರಿಸತೊಡಗುತ್ತಾರೆ. ಶ್ರೀಸಾಮಾನ್ಯನ ದೃಷ್ಟಿಯಲ್ಲಿ ಬಜೆಟ್ ಹೇಗಿದೆ ಎಂಬುದನ್ನು ಈ ಲೇಖನ ತಿಳಿಸುತ್ತದೆ—ಉಗಾದಿಯ ದಿನದಂದು ಪಂಚಾಂಗಶ್ರವಣ ಮಾಡಿಸುವಂತೆ.**

ಪ್ರತಿವರ್ಷ ಜನವರಿ ಕಳೆಯುತ್ತಿರುವಂತೆ ಬಹಳ ಜನರ ಮನಸ್ಸು ಒಂದು ವಿಷಯವಾಗಿ ಚಿಂತಿಸುತ್ತದೆ. ಬಹಳ ಜನರೆಂದರೆ ಒಟ್ಟೂ ಜನಸಂಖ್ಯೆಯ ದೃಷ್ಟಿಯಿಂದಲ್ಲ. ಯಾಕೆಂದರೆ ಬಹಳಷ್ಟು ಜನಕ್ಕೆ 'ಬಜೆಟ್' ಶಬ್ದವೇ ಅಪರಿಚಿತ. ಚಿಂತಿಸುವವರಿಗೆ ಈ ಶಬ್ದ ಏನನ್ನೋ ನಿರೀಕ್ಷಿಸಲಿಕ್ಕೆ, ಏನೋ ದುಗುಡಕ್ಕೆ ಕಾರಣವಾಗುತ್ತದೆ.

ಬಜೆಟ್ ಅಥವಾ ಮುಂಗಡ ಪತ್ರವನ್ನು ನಾವು ಪ್ರತಿವರ್ಷವೂ ಪಡೆಯುತ್ತಲೇ ಬಂದಿದ್ದೇವೆ. ಮುಂದಿನ 12 ತಿಂಗಳುಗಳಲ್ಲಿ ಯಾವ ಯಾವ ಮೂಲಗಳಿಂದ ಎಷ್ಟೆಷ್ಟನ್ನು ಹೇಗೆ ಸಂಗ್ರಹಿಸಿ ಯಾವ ಯಾವ ಬಾಬುಗಳಿಗಾಗಿ ಎಷ್ಟೆಷ್ಟು ಮತ್ತು ಹೇಗೆ ಹೇಗೆ ವ್ಯಯಿಸಬೇಕೆಂಬುದರ ಮುಂದಾಲೋಚನೆಯೇ ಬಜೆಟ್. ಇದನ್ನು ಹಣಕಾಸು ಸಚಿವರು ಲೋಕಸಭೆಯಲ್ಲಿ ಮಂಡಿಸುತ್ತಾರೆ.

## ಬೆಲೆಗಳಿಗೆ ಒತ್ತು

ಕಳೆದ ಫೆಬ್ರವರಿ 28ರಂದು ಮಂಡಿಸಲಾದ 1994–95ರ ಬಜೆಟ್ಟಿನ ಕೆಲವು ಅಂಶಗಳನ್ನು ಒಬ್ಬ ಸಾಮಾನ್ಯ ವ್ಯಕ್ತಿಯ ದೃಷ್ಟಿಯಲ್ಲಿ ನೋಡುವುದು ಈ ಬರಹದ ಉದ್ದೇಶ. ಅವನಿಗೆ ನೇರವಾಗಿ ಸಂಬಂಧವಿಲ್ಲದ ಅಂಶಗಳಿಗೆ ಒತ್ತು ಕೊಟ್ಟಿಲ್ಲ.

ಬಜೆಟ್ ಪೂರ್ವದಲ್ಲೇ ಅಡಿಗೆ ಅನಿಲ, ಡೀಸೆಲ್ ಹಾಗೂ ಪೆಟ್ರೋಲ್ ಬೆಲೆಗಳು ಸಾಕಷ್ಟು ಏರಿದ್ದರಿಂದ ಈ ಅಂಶಗಳನ್ನು ಪ್ರಸ್ತುತ ಬಜೆಟ್‌ನಲ್ಲಿ ಸೇರಿಸಿಲ್ಲ. "ಬಜೆಟ್‌ನಿಂದಾಗಿ ಈ ವಸ್ತುಗಳ ಬೆಲೆ ಏರಿಲ್ಲ" ಎಂಬುದು ಸತ್ಯ. ಹಾಗಾಗಿ ಶ್ರೀಸಾಮಾನ್ಯ ಈ ಬಜೆಟ್‌ನಿಂದ ಏನನ್ನೂ ವಿಶೇಷವಾಗಿ ನಿರೀಕ್ಷಿಸುವಂತಿರಲಿಲ್ಲ. ನಿಶ್ಚಿತ ಆದಾಯವಿರುವವರು, ವಿಶೇಷತಃ ನೌಕರವರ್ಗದವರು, ವರಮಾನ ವಿನಾಯಿತಿ ಮಿತಿಯನ್ನು ವಿಸ್ತರಿಸಿ, ವರಮಾನ ತೆರಿಗೆಯ ದರವನ್ನು ಇಳಿಸುವರೆಂಬ ನಿರೀಕ್ಷೆಯಲ್ಲಿದ್ದರು.

1994–95ರ ಬಜೆಟ್‌ನಲ್ಲಿ ರೂ 6,000 ಕೋಟಿ ಅಂದಾಜು ಬಜೆಟ್ ಕೊರತೆಯನ್ನು ತೋರಿಸಲಾಗಿದೆ. ಕಳೆದ ಬಾರಿ ಇದು ರೂ 4,315 ಕೋಟಿ ಇತ್ತು. ಆದರೆ ಪರಿಷ್ಕೃತ ಅಂದಾಜು 9,000 ಕೋಟಿ ರೂ.ಗಳನ್ನು ದಾಟಿತು. ಈ ಕಾರಣದಿಂದಲೇ ನಿರೀಕ್ಷೆಗೆ ಮೀರಿದ ಬೆಲೆ ಏರಿಕೆ ಆಯಿತೆಂಬುದು ಅರ್ಥಶಾಸ್ತ್ರಜ್ಞರ ಅಭಿಪ್ರಾಯ. ಈ ವರ್ಷವೂ ಇದೇ ರೀತಿ ಮುಂದುವರಿದರೆ ಪರಿಷ್ಕೃತ ಅಂದಾಜು ಸುಮಾರು ರೂ. 13,000 ಕೋಟಿಯನ್ನು ದಾಟಬಹುದು. ಅರ್ಥವ್ಯವಸ್ಥೆಯಲ್ಲಿ ಒಂದು ಶಿಸ್ತನ್ನು ಪಾಲಿಸಿಕೊಂಡು ಬರುತ್ತಿಲ್ಲ ಎಂಬುದನ್ನು ಇದು ತೋರಿಸುತ್ತದೆ. ಇದರಿಂದಾಗಿ ಮಿತಿಮೀರಿದ ಬೆಲೆಯೇರಿಕೆಯಾಗಿ ಶ್ರೀಸಾಮಾನ್ಯ ಬಹಳ ಕಂಗೆಡುವಂತಾಗುತ್ತದೆ.

## ಉದ್ಯಮಕ್ಕೆ ಅನುಕೂಲ

ಆಮದು ಸುಂಕ ಮತ್ತು ಅಬಕಾರಿ ಸುಂಕಗಳ ಪುನರ್‍ರಚನೆಯಿಂದ ನಮ್ಮ ಉದ್ಯಮಿಗಳಿಗೆ ಅನುಕೂಲ ಆದಂತಿದೆ. "ಅಗ್ಗದ ವಿದೇಶೀ ವಸ್ತುಗಳು ನಮ್ಮ ಮಾರುಕಟ್ಟೆಯನ್ನು ಪ್ರವೇಶಿಸುತ್ತವೆ" ಎಂಬ ಕೆಲವರ ಅಭಿಪ್ರಾಯ ಸರಿಯೇನೋ ಎಂದೆನಿಸುತ್ತದೆ. ಆಮದುಮಾಡಿಕೊಳ್ಳುವ ಕಚ್ಚಾವಸ್ತುಗಳ ಮೇಲಿನ ಅಬಕಾರಿ ಸುಂಕವನ್ನು ಶೇ. 85ರಿಂದ ಶೇ. 65ಕ್ಕೆ ಇಳಿಸಿರುವುದು ಒಂದು ಯುಕ್ತ ಕ್ರಮ. ಇದರಿಂದ, ನಮ್ಮಲ್ಲಿ ತಯಾರಾಗುವ ಸಿದ್ಧವಸ್ತುಗಳು ಸ್ಪರ್ಧಾತ್ಮಕ ಮಾರುಕಟ್ಟೆಯನ್ನು ಪ್ರವೇಶಿಸುವಂತಾದೀತು.

ಶೇ. 40ರ ಏಕಪ್ರಕಾರದ ಕಾರ್ಪೊರೇಟ್ ತೆರಿಗೆಯನ್ನು ಸೂಚಿಸಿರುವುದು ದೇಶೀಯ ಕಂಪೆನಿಗಳಿಗೆ ಸ್ವಲ್ಪ ಸಮಾಧಾನ ತಂದಿದೆ. ಆದರೆ ಈ ಸಡಿಲಿಕೆ, ಪುನರ್‍ರಚನೆಗಳಿಂದ ಬಳಕೆದಾರನಿಗೆ ಏನು ಲಾಭ ದೊರಕೀತು ಎಂಬುದನ್ನು ಈಗ ಹೇಳಲಿಕ್ಕಾಗದು. ಯಾಕೆಂದರೆ ಕಳೆದ ಬಜೆಟ್‌ನಲ್ಲಿ ತೋರಿಸಲಾದ ರಿಯಾಯಿತಿಗಳು ನಿಜವಾದ ಬಳಕೆದಾರನನ್ನು ತಲುಪಲಿಲ್ಲ. ಅವನಿಗೆ ತಲುಪಿದ್ದು ಬೆಲೆ ಮಾತ್ರ.

### ವರಮಾನ ತೆರಿಗೆದಾರರಿಗೆ

ವರಮಾನ ತೆರಿಗೆದಾರರಿಗೆ ಹೇಳಿಕೊಳ್ಳುವಂಥ ಲಾಭವೇನೂ ಆಗಿಲ್ಲ. ಈಗಿನ ಬೆಲೆ ಏರಿಕೆಯನ್ನು ಗಮನಿಸಿದರೆ ವರಮಾನ ಮಿತಿಯಲ್ಲಿಯ 5 ಸಾವಿರ ರೂಪಾಯಿಗಳ ಹೆಚ್ಚಳ ತೃಪ್ತಿಕರವಲ್ಲ. ಈಗಿನ ರೂ 30 ಸಾವಿರದ ಮಿತಿಯನ್ನು 50 ಸಾವಿರ ರೂಪಾಯಿಗಳ ವರೆಗೆ ಏರಿಸಬಹುದೆಂದು ಜನರು ನಿರೀಕ್ಷಿಸಿದ್ದರು. ಪುರುಷ ಮತ್ತು ಉದ್ಯೋಗಸ್ಥ ಮಹಿಳೆಯರಿಗೆ ಅನುಕ್ರಮವಾಗಿ ರೂ 15 ಸಾವಿರ ಮತ್ತು 17 ಸಾವಿರ ಸ್ಟಾಂಡರ್ಡ್ ಕಡಿತವನ್ನು ಘೋಷಿಸಲಾಗಿದೆ. 65 ವರ್ಷ ದಾಟಿದ ಹಿರಿಯ ನಾಗರಿಕರಿಗೆ 1ಲಕ್ಷ ರೂಪಾಯಿ ವಾರ್ಷಿಕ ವರಮಾನಕ್ಕೆ ತೆರಿಗೆಯಿಲ್ಲ. ಸ್ವಂತ ಗೃಹ ನಿರ್ಮಾಣಕ್ಕೆಂದು ತೆಗೆದುಕೊಂಡ ಸಾಲದ ಮೇಲಿನ ವಾರ್ಷಿಕ ಬಡ್ಡಿ ರೂ. 10 ಸಾವಿರದ ವರೆಗೆ ವರಮಾನದಿಂದಲೇ ನೇರವಾಗಿ ಕಡಿತಗೊಳಿಸಬಹುದು. ಇದೊಂದು ಸ್ವಾಗತಾರ್ಹ ಕ್ರಮ. ಇದರಿಂದಾಗಿ ಮನೆ ಕಟ್ಟಿಸಿದವನು ಸ್ವಲ್ಪ ನಿರಾಳವಾಗಿ ಉಸಿರಾಡುವಂತಾದೀತು.

### ಸಬ್ಸಿಡಿ

ಬಜೆಟ್ ಕೊರತೆಯನ್ನು ತಗ್ಗಿಸುವ ಸಲುವಾಗಿ ಆಹಾರ ವಸ್ತುಗಳು ಮತ್ತು ರಸಗೊಬ್ಬರಗಳ ಮೇಲೆ ನೀಡುತ್ತಿದ್ದ ಸಬ್ಸಿಡಿಯನ್ನು ತೆಗೆದುಹಾಕಬಹುದೆಂಬ ಆತಂಕವಿತ್ತು. ಆದರೆ ಹಾಗಾಗಗೊಡದೆ ಒಟ್ಟು 800 ಕೋಟಿ ರೂಪಾಯಿಗಳ ಸಬ್ಸಿಡಿ ನೀಡಿದ್ದು ರೈತರಿಗೂ ಬಡವರ್ಗದವರಿಗೂ ಪ್ರತ್ಯಕ್ಷವಾಗಿಯೂ, ಅಪ್ರತ್ಯಕ್ಷವಾಗಿಯೂ ಅನುಕೂಲವಾಗಿದೆ, ಸಮಾಧಾನ ತಂದಿದೆ. ಕೃಷಿ ಅಭಿವೃದ್ಧಿಗಾಗಿ ರೂ. 2,637 ಕೋಟಿಯನ್ನು ತೆಗೆದಿರಿಸಲಾಗಿದೆ. ಗ್ರಾಮೀಣ ಅಭಿವೃದ್ಧಿಗೆಂದು ರೂ. 6,036 ಕೋಟಿಯನ್ನು ಅಂದಾಜು ಮಾಡಲಾಗಿದೆ. ಹೆಚ್ಚು ಹೆಚ್ಚು ಜನರಿಗೆ ಉದ್ಯೋಗಾವಕಾಶ ಕಲ್ಪಿಸುವ ಕಾರ್ಯಕ್ರಮಗಳಿಗೆ, ಗ್ರಾಮೀಣ ಪ್ರದೇಶದಲ್ಲಿ ಬಂಡವಾಳ ರಚನೆಗೆ ಮಹತ್ವ ಕೊಡಲಾಗಿದೆ. ಇವುಗಳನ್ನು ಯಾವ ರೀತಿಯಲ್ಲಿ ಅನುಷ್ಠಾನಕ್ಕೆ ತರಲಾಗುವುದು ಹಾಗೂ ಆ ಮೂಲಕ ನಿರೀಕ್ಷಿತ ಫಲ ಎಷ್ಟು ದೊರಕಬಹುದು ಎಂಬುದರ ಮೇಲೆ ಅವುಗಳ ಯಶಸ್ಸು ನಿರ್ಧಾರವಾಗುವುದು. ಯಾಕೆಂದರೆ ಉದ್ಯೋಗಾವಕಾಶ ಕಾರ್ಯಕ್ರಮಗಳು, ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು ಒಂದಲ್ಲ ಒಂದು ರೀತಿಯಲ್ಲಿ ಕಳೆದ ಎರಡು ದಶಕಗಳಿಗಿಂತಲೂ ಹೆಚ್ಚು ಕಾಲದಿಂದ ನಡೆಯುತ್ತಿವೆಯಾದರೂ ಅವುಗಳಿಂದ ನಿರೀಕ್ಷಿತ ಫಲ ದೊರಕಿಲ್ಲ. ಇದಕ್ಕೆ ಜನಸಂಖ್ಯಾಸ್ಫೋಟ, ಅಸ್ವಾಸ್ಥ್ಯ, ಅನಕ್ಷರತೆಗಳು ಪ್ರಧಾನ ಕಾರಣಗಳೆಂದು ಎಲ್ಲರೂ ಹೇಳುತ್ತಲೇ ಇರುವರಾದರೂ ಅವುಗಳ ನಿವಾರಣೆಗೆ ಸರಕಾರ ಜನರ ವಿಶ್ವಾಸ ಗಳಿಸಿಕೊಂಡು ಮನಃಪೂರ್ವಕವಾಗಿ ಕಾರ್ಯಕ್ರಮಗಳನ್ನು ಜಾರಿಗೊಳಿಸಿಲ್ಲವೆಂದೇ ಹೇಳಬೇಕು. ಎಲ್ಲಿಯವರೆಗೆ ವಿವಿಧ ಯೋಜನೆಗಳನ್ನು ಸರಿಯಾಗಿ ಕಾರ್ಯರೂಪಕ್ಕೆ ತರಲಾಗದೋ, ಜನರಿಗೆ ಸರಿಯಾಗಿ ತಲುಪಿಸಲಿಕ್ಕಾಗದೋ, ಅಲ್ಲಿಯವರೆಗೂ ಎಷ್ಟೇ ಬಜೆಟ್ ಮಂಡಿಸಲ್ಪಟ್ಟರೂ, ಎಷ್ಟೇ ಹಣ ತೆಗೆದಿರಿಸಿದರೂ, ಅದರ ಸದ್ವಿನಿಯೋಗ ಆಗದ್ದರಿಂದ ನಿರೀಕ್ಷಿತ ಫಲ ದೊರಕದು.

### ಸಮಾಜಕಲ್ಯಾಣ

ಸಮಾಜಕಲ್ಯಾಣ ಕಾರ್ಯಕ್ರಮಗಳಿಗೆ ಆದ್ಯತೆ ಕೊಡಬೇಕು. ಜನರ ಆರೋಗ್ಯ, ವಿದ್ಯೆಗಳಿಗಾಗಿ ಸಾಕಷ್ಟು ಹಣವನ್ನು ತೆಗೆದಿರಿಸಬೇಕು. ನಮ್ಮ ಅಗಾಧವಾದ ಮಾನವ ಶಕ್ತಿಯನ್ನು ಸರಿಯಾಗಿ ದುಡಿಸಿಕೊಳ್ಳಬೇಕು. ಎಲ್ಲರಿಗೂ ಒಂದಲ್ಲ ಒಂದು ಉದ್ಯೋಗ ದೊರೆಯುವಂತಾಗಬೇಕು.

ಬಜೆಟ್ ಮಂಡಿಸುವಾಗಿನ ಉತ್ಸಾಹ ದಿನಕಳೆದಂತೆ ಕಡಿಮೆಯಾಗುತ್ತ ಹೋಗುವಂತೆ ಅನ್ನಿಸುತ್ತದೆ. ಆರ್ಥಿಕ ಶಿಸ್ತನ್ನು ಹತೋಟಿಯಲ್ಲಿಟ್ಟುಕೊಳ್ಳಲಾಗದೆ ಕೊರತೆಗಳ ಕಂದರ ಅಗಲವಾಗುತ್ತ ಹೋಗಿ ಹಣದುಬ್ಬರದ ಪ್ರಮಾಣ ಮತ್ತು ಬೆಲೆ ಏರಿಕೆಯ ಪ್ರವೃತ್ತಿ ಏರಿ ಏರಿ ಹತೋಟಿ ತಪ್ಪಿದರೆ ಅಭಿವೃದ್ಧಿಯ ಉದ್ದೇಶಗಳು ಫಲ ನೀಡಲಾರವು.

### ವಿವಿಧಾಭಿಪ್ರಾಯ

ಬಜೆಟ್ 1994–95ರ ಕುರಿತು ರಾಜಕಾರಣಿಗಳ, ಅರ್ಥಶಾಸ್ತ್ರಜ್ಞರ ಕೆಲವು ಅಭಿಪ್ರಾಯಗಳನ್ನು ನೋಡೋಣ: 'ದೇಶದ ಅಭಿವೃದ್ಧಿಯನ್ನು ಲಕ್ಷ್ಯದಲ್ಲಿರಿಸಿಕೊಂಡ, 21ನೇ ಶತಮಾನದತ್ತ ದೇಶವನ್ನು ಕೊಂಡೊಯ್ಯಲು ಅನುವು ಮಾಡಿಕೊಡುವ ಬಜೆಟ್ ಎಂದು ಆಳುವ ಪಕ್ಷದವರು ಹೇಳಿಕೊಂಡರೆ, ವಿವಿಧ ಇತರ ಪಕ್ಷಗಳವರು ಬೇರೆಬೇರೆಯಾಗಿಯೇ ಅಭಿಪ್ರಾಯಪಟ್ಟಿದ್ದಾರೆ. 'ಜನವಿರೋಧಿ' ಎಂದೊಬ್ಬರೆಂದರೆ, 'ಇದು ಉಳ್ಳವರ ಪರವಾದದ್ದು, ಬಲಿಷ್ಠರನ್ನು ಇನ್ನಷ್ಟು ಬಲಿಷ್ಠರನ್ನಾಗಿಸುತ್ತದೆ'ಎಂದರಿನ್ನೊಬ್ಬರು. 'ದೇಶವನ್ನು ಸಾಲದ ಹಳ್ಳಕ್ಕೆ ತಳ್ಳಿದೆ' ಎಂಬುದು ಮತ್ತೊಬ್ಬರ ಅಭಿಪ್ರಾಯ. ಈ ಹೇಳಿಕೆಗಳಲ್ಲಿ ಸತ್ಯಾಂಶದ ಜೊತೆಗೇ ರಾಜಕೀಯ ಭಿನ್ನಾಭಿಪ್ರಾಯಗಳ ನೆರಳೂ ಇರಬಹುದಾದ್ದರಿಂದ ಸತ್ಯವನ್ನಷ್ಟೇ ಸ್ವೀಕರಿಸಬೇಕು. ಇನ್ನು ಅರ್ಥಶಾಸ್ತ್ರಜ್ಞರ ಅಭಿಪ್ರಾಯಗಳನ್ನು ಗಮನಿಸಿದರೆ ಇನ್ನೂ ದಿಗಿಲು ಹುಟ್ಟಿಸುತ್ತವೆ; ಶ್ರೀಸಾಮಾನ್ಯನಿಗೆ ಯಾವುದು ಸರಿ ಎಂದು ಗೊತ್ತಾಗುವುದಿಲ್ಲ. ನಮ್ಮ ಅರ್ಥಸಚಿವಾಲಯದ ಕಾರ್ಯದರ್ಶಿಗಳು, ಈ ಬಜೆಟ್‌ನಿಂದಾಗಿ ಬೆಲೆ ಏರಿಕೆ ಆಗದೆಂದು ಭರವಸೆ ಕೊಟ್ಟಿದ್ದಾರೆ. ಆದರೆ ಇದಕ್ಕೆ ತೀರಾ ವಿರುದ್ಧವಾದ ಅಭಿಪ್ರಾಯಗಳನ್ನು ಇನ್ನೊಬ್ಬ ಅರ್ಥಶಾಸ್ತ್ರಜ್ಞರು ಕೊಟ್ಟಿದ್ದಾರೆ:

* ಶೇ 10ರಷ್ಟು ಹಣದುಬ್ಬರದ ಬೀಜ ಈ ಬಜೆಟ್ ಪ್ರಸ್ತಾಪದಲ್ಲಿದೆ.
* 1993–94ರಲ್ಲೂ ಕೈಗಾರಿಕೆಗಳಿಗೆ ಕರ ವಿನಾಯ್ತಿ ಇತ್ತು.

[9ನೇ ಪುಟ ನೋಡಿ]

# ಬಜೆಟ್ ರ್ಗ್ಳ : ಬ್ಯಾಂಕರನ ದೃಷ್ಟಿಯಲ್ಲಿ

ವೈ. ಎಸ್. ಉಷಾ
ಭಾರತೀಯ ಸ್ಟೇಟ್ ಬ್ಯಾಂಕ್, ಜಾಲಹಳ್ಳಿ ಶಾಖೆ, ಬೆಂಗಳೂರು

ಬ್ಯಾಂಕಿಂಗ್ ವ್ಯವಸ್ಥೆಯನ್ನು ಮತ್ತೆ ಆರೋಗ್ಯಕರವಾಗಿ ಮಾಡಲು ಇದುವರೆಗೆ ತೆಗೆದುಕೊಂಡಿರುವ ಕ್ರಮಗಳಿಂದಾಗಿರುವ ಪ್ರಗತಿಯನ್ನು ಗಮನಿಸಿ, ಇದನ್ನು ಸುಪುಷ್ಟಗೊಳಿಸುವುದೂ ತಮ್ಮ ಬಜೆಟ್ಟಿನ ಒಂದು ಉದ್ದೇಶ ಎಂದು ಹಣಕಾಸು ಮಂತ್ರಿ ಹೇಳಿಕೊಂಡಿದ್ದಾರೆ. ಆದರೆ ಈ ಉದ್ದೇಶ ಎಷ್ಟರಮಟ್ಟಿಗೆ ಸಾಧಿತವಾಗುತ್ತದೆ?

ಯುಗಯುಗಾದಿ ಕಳೆದರೂ ಯುಗಾದಿ ಮರಳಿ ಬರುವಂತೆ ಬಜೆಟ್ ರ್ಗ್ಳರಲ್ಲಿ ಮರಳಿ ಬಂದಿದೆ. ಸರ್ಕಾರದ ಹಿಂದಿನ ವರ್ಷದ ಆರ್ಥಿಕ ಸಾಧನೆ, ವೈಫಲ್ಯ, ಮುಂದಿನ ಆರ್ಥಿಕ ಯೋಜನೆ, ವೆಚ್ಚ ಹಾಗೂ ಆಶೋತ್ತರಗಳನ್ನು ಬಿಂಬಿಸುವ ಬಜೆಟ್ ಹಣಕಾಸು ಮಂತ್ರಿಗಳ ಜಾಣತನಕ್ಕೊಂದು ಸವಾಲೇ ಸರಿ. ದೇಶದ ಅಭಿವೃದ್ಧಿ, ಆರ್ಥಿಕ ಪರಿಸ್ಥಿತಿ, ಜನಸಾಮಾನ್ಯರ ಸ್ಥಿತಿಗತಿ, ಅಂತರರಾಷ್ಟ್ರೀಯ ವಾಣಿಜ್ಯ ಸಂಬಂಧಗಳು, ರಾಜಕೀಯ ಮುಂದಾಲೋಚನೆ, ಹಣಕಾಸಿನ ಪರಿಸ್ಥಿತಿಯ ಅಂಕಿ ಅಂಶಗಳು, ಲಭ್ಯವಿರುವ ಆದಾಯ ಮೂಲಗಳು, ಯೋಜನಾ ವೆಚ್ಚಗಳು ಎಲ್ಲವನ್ನೂ ಒಳಗೊಂಡು ಬರುವ ಮುಂಗಡಪತ್ರದ ಮಂಡನೆ ಈಚಿನ ದಿನಗಳಲ್ಲಿ ಒಂದು ವಾರ್ಷಿಕ ಉತ್ಸವದಂತೆಯೇ ಆಗಿದೆ. ಹಣದುಬ್ಬರದ ಈ ದಿನಗಳಲ್ಲಿ ಯಾವುದರ ಬೆಲೆ ಹೆಚ್ಚುವುದೋ, ಎಲ್ಲಿ ತೆರಿಗೆ ಹೆಚ್ಚುವುದೋ ಯಾವ ವಿನಾಯಿತಿ ದೊರಕಬಹುದೊ ಎಂದು ಎಲ್ಲರೂ ಕುತೂಹಲ ಆತಂಕಗಳಿಂದ ನಿರೀಕ್ಷಿಸುತ್ತಿದ್ದ ಬಜೆಟ್, ಇದೇ ಫೆಬ್ರವರಿ 28ರಂದು ಹಣಕಾಸು ಮಂತ್ರಿ ಡಾ. ಮನಮೋಹನ ಸಿಂಗರಿಂದ ಲೋಕಸಭೆಯಲ್ಲಿ ಮಂಡಿತವಾಯಿತು.

'ಹಣದುಬ್ಬರದ ಹೆಚ್ಚಳಕ್ಕೆ ಮುಕ್ತ ಆಹ್ವಾನ ಕೊಡುವ ಬಜೆಟ್', 'ಖಾಸಗಿ ವಲಯ ಪರ ಬಜೆಟ್,''ಸ್ವಾಗತಾರ್ಹ ಬಜೆಟ್', ರಾಜಕೀಯ ದೂರಾಲೋಚನೆಯ ಬಜೆಟ್,' 'ಧೈರ್ಯಶಾಲಿ ಬಜೆಟ್,' 'ಆರ್ಥಿಕ ಅಭಿವೃದ್ಧಿಗೆ ಹೇಳಿ ಮಾಡಿಸಿದ ಬಜೆಟ್' ಎಂದೆಲ್ಲಾ ಹೊಗಳಿಕೆ, ತೆಗಳಿಕೆಗಳನ್ನು ಅರ್ಥಶಾಸ್ತ್ರ ಪಂಡಿತರು, ಅಧಿಕಾರಿಗಳು, ರಾಜಕಾರಣಿಗಳಿಂದ ಪಡೆದ ಬಜೆಟ್ ಬ್ಯಾಂಕರನ ದೃಷ್ಟಿಯಲ್ಲಿ ಹೇಗಿದೆ ಎಂಬುದನ್ನು ಈಗ ನೋಡೋಣ.

ಪ್ರತಿಭೂತಿ ಹಗರಣ, ಖಾಸಗೀಕರಣದ ಅಲೆ, ನರಸಿಂಹಂ ಸಮಿತಿಯ ವರದಿಯ ಹಿನ್ನೆಲೆಯಲ್ಲಿ ರ್ಗ್ಳರ ಬಜೆಟ್ ಬ್ಯಾಂಕುಗಳ ಪಾಲಿಗೆ ಎಂದಿಗಿಂತ ಹೆಚ್ಚಿನ ಮಹತ್ವವುಳ್ಳದ್ದಾಗಿದ್ದರೂ ಅಷ್ಟೇನೂ ನಿರಾಶೆ ತಂದಿಲ್ಲವೆನ್ನಬಹುದು.

### ಬಡ್ಡಿದರ ಕಡಿತ

ಈ ಬಾರಿಯ ಬಜೆಟ್‌ನಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳು ನೀಡುವ ಮೂರು ವರ್ಷಗಳಿಗಿಂತ ಹೆಚ್ಚಿನ ಅವಧಿ ಸಾಲಗಳಿಗೆ ಬಡ್ಡಿದರವನ್ನು ಶೇ. 15ರಿಂದ ಶೇ. 14ಕ್ಕೆ ಇಳಿಸಲಾಗಿದೆ. ಇದೊಂದು ಸ್ವಾಗತಾರ್ಹ ಕ್ರಮವಾಗಿದ್ದು ಕೈಗಾರಿಕೆಗಳಿಗೆ ಇದರಿಂದ ಉಪಯೋಗವಾಗಬಹುದಾದರೂ, ಬ್ಯಾಂಕುಗಳ ಲಾಭ ಪ್ರದತೆಯ ಮೇಲೆ ಹೆಚ್ಚಿನ ಪರಿಣಾಮವನ್ನೇನೂ ಬೀರುವುದಿಲ್ಲ. ಏಕೆಂದರೆ ಒಟ್ಟು ಸಾಲನೀಡಿಕೆಯಲ್ಲಿ ಶೇ. 30ರಷ್ಟನ್ನು ಮಾತ್ರ ಅವಧಿ ಸಾಲವಾಗಿ ನೀಡುವುದರಿಂದ ಹಣಕಾಸನ್ನು ಈ ಬಗೆಯ ಸಾಲಗಳಲ್ಲಿ ಅಲ್ಪ ಸ್ವಲ್ಪ ಹೆಚ್ಚಳ ಮಾತ್ರ ಕಂಡುಬರಬಹುದೆಂಬುದು ಬ್ಯಾಂಕಿಂಗ್ ವಲಯಗಳ ಅಭಿಪ್ರಾಯ.

### ಗ್ರಾಮೀಣ ಸಾಲಗಳಿಗೆ ಉತ್ತೇಜನ

ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಗಾಗಿ ಇರುವ ರಾಷ್ಟ್ರೀಯ ಬ್ಯಾಂಕಾದ 'ನಬಾರ್ಡ್'ಗೆ ಈ ಬಾರಿ ಬಜೆಟ್‌ನಲ್ಲಿ ಹೆಚ್ಚಿನ ಸಹಾಯಧನ ಒದಗಿಸಲಾಗಿದೆ. ತಲಾ ನೂರು ಕೋಟಿ ರೂಪಾಯಿಗಳನ್ನು ರಿಸರ್ವ್ ಬ್ಯಾಂಕು ಹಾಗೂ ಕೇಂದ್ರ ಸರ್ಕಾರಗಳು ನಬಾರ್ಡ್‌ಗೆ ನೀಡಲಿದ್ದು ಈ ಮೊತ್ತದಿಂದ ಅದರ ಬಂಡವಾಳ ಸುಮಾರು ಮೂರು ಪಟ್ಟು ಹೆಚ್ಚಲಿದ್ದು ಆ ಮೂಲಕ ಅದು ಗ್ರಾಮೀಣ ಸಾಲ ನೀಡಿಕೆಯಲ್ಲಿ ಸಹಕಾರಿ ಬ್ಯಾಂಕುಗಳ ಸಹಾಯದಿಂದ ಉತ್ತಮ ಪಾತ್ರ ವಹಿಸಬಹುದೆಂದು ಆಶಿಸಲಾಗಿದೆ. ಈ ಕ್ರಮದಿಂದ ಬ್ಯಾಂಕುಗಳ ಗ್ರಾಮೀಣ ಶಾಖೆಗಳ ಹಾಗೂ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಮೇಲಿನ ಹೊರೆಗಳು ಇಳಿದು ಅವು ತಮ್ಮ ಏಳಿಗೆಗೆ ಇನ್ನೂ ಪರಿಣಾಮಕಾರಿಯಾಗಿ ಕೆಲಸ ಮಾಡಬಹುದಾಗಿದೆ.

### ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು

ಈಗಾಗಲೇ ಎಲ್ಲರಿಗೂ ತಿಳಿದಿರುವಂತೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪರಿಸ್ಥಿತಿ ಅಷ್ಟೇನೂ ಆಶಾದಾಯಕವಾಗಿಲ್ಲ

ಇರುವ ಸುಮಾರು 196 ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪೈಕಿ ಸುಮಾರು 150 ಕಳೆದ ಐದು ವರ್ಷಗಳಲ್ಲಿ ಸತತವಾಗಿ ನಷ್ಟವನ್ನೇ ಭರಿಸುತ್ತಿವೆ. ಹೆಚ್ಚಿನ ಬ್ಯಾಂಕುಗಳ ಮೂಲನಿಧಿ (Equity) ಹಾಗೂ ಮೀಸಲುಗಳು ಖಾಲಿಯಾಗಿದ್ದು ಉಳಿದ ಬ್ಯಾಂಕುಗಳಲ್ಲಿ ನಷ್ಟವೇ ಇರುವ ಠೇವಣಿಗಳನ್ನು ತಿಂದುಹಾಕುತ್ತಿದೆ. ಇಂಥ ಪರಿಸ್ಥಿತಿಯಲ್ಲಿ ಗ್ರಾಮೀಣ ಬ್ಯಾಂಕುಗಳು ಇರಬೇಕೇ? ಬೇಡವೇ ? ಎಂಬುದೇ ಚರ್ಚೆಯಾಗಿ ಪರಿಣಮಿಸಿತ್ತು. ಈ ನಷ್ಟ ಪೀಡಿತ ಬ್ಯಾಂಕುಗಳನ್ನು ಅವುಗಳ ಪ್ರಾಯೋಜಕ ಬ್ಯಾಂಕುಗಳೇ ತೆಗೆದುಕೊಳ್ಳಲಿ ಎಂಬುದು ಒಂದು ಅಭಿಪ್ರಾಯವಾದರೆ, ಅವುಗಳಿಗೆ ಹೆಚ್ಚಿನ ಹಣ ಸಹಾಯ ಮಾಡಿ ಪುನಶ್ಚೇತನಗೊಳಿಸಬೇಕೆಂಬ ಅಭಿಪ್ರಾಯವೂ ಇತ್ತು. ಇದೀಗ ಈ ಎಲ್ಲ ಜಿಜ್ಞಾಸೆಗಳಿಗೂ ಮನಮೋಹನ ಸಿಂಗರು ತೆರೆ ಎಳೆದಿದ್ದು, ನಷ್ಟದಲ್ಲಿರುವ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪೈಕಿ 50ನ್ನು ರಾಷ್ಟ್ರಾದ್ಯಂತ ಆರಿಸಿಕೊಂಡು ಅವುಗಳ ಪುನರ್ ಸಂರಚನೆ ಮಾಡಿ ಹೊಸ ಬಂಡವಾಳ ಹೂಡಿ ಅವುಗಳ ಆಸ್ತಿ–ಹೊಣೆ ತಃಖ್ತೆಗಳನ್ನು ಉತ್ತಮಪಡಿಸುವ ಒಂದು ಕ್ರಮವನ್ನು ಪ್ರಯೋಗಾರ್ಥವಾಗಿ ತೆಗೆದುಕೊಳ್ಳುವುದಾಗಿ ಈ ಬಜೆಟ್‌ನಲ್ಲಿ ಪ್ರಕಟಿಸಿದ್ದಾರೆ. ಇದರ ಯಶಸ್ಸಿನ ಆಧಾರದ ಮೇಲೆ ಉಳಿದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಪುನಶ್ಚೇತನಗೊಳಿಸುವ ವಿಚಾರವಿದೆಯಂತೆ. ಇದೊಂದು ತೀರಾ ಅಗತ್ಯದ ನಿರ್ಧಾರವಾಗಿದ್ದು, ಇದರ ಮಂಡನೆ ನಿಜವಾಗಿಯೂ ಬ್ಯಾಂಕಿಂಗ್ ವಲಯಗಳಲ್ಲಿ ಸಂತಸ ತಂದಿದೆ.

### ರಾಷ್ಟ್ರೀಯ ಮಾರುಕಟ್ಟೆ

ಕೃಷಿ ಅಭಿವೃದ್ಧಿ ಹಾಗೂ ಕೃಷಿಕರ ಅಭಿವೃದ್ಧಿಗಾಗಿ ಈ ಬಜೆಟ್‌ನಲ್ಲಿ ಹಲವಾರು ಕ್ರಮಗಳನ್ನು ತಿಳಿಸಲಾಗಿದೆ. ಅವುಗಳಲ್ಲಿ ಮುಖ್ಯವಾದುದೆಂದರೆ 'ರಾಷ್ಟ್ರೀಯ ಮಾರುಕಟ್ಟೆಯ ಸ್ಥಾಪನೆ.' ಕೃಷಿ ಉತ್ಪನ್ನಗಳನ್ನು ಮಾರಲು ಏಕರೂಪ ಬೆಲೆ ಇಡಲು ಹಾಗೂ ಮಧ್ಯವರ್ತಿಗಳ ಕಾಟ ತಪ್ಪಿಸಿ ರೈತರಿಗೆ ಸರಿಯಾದ ಬೆಲೆ ಸಿಗುವಂತೆ ಮಾಡಲು ಕೇಂದ್ರ ಸರ್ಕಾರ 'ರಾಷ್ಟ್ರೀಯ ಮಾರುಕಟ್ಟೆ'ಯೊಂದನ್ನು ಸ್ಥಾಪಿಸಲಿದ್ದು ಆದರಿಂದ ರೈತರಿಗೆ ಹೆಚ್ಚಿನ ಅನುಕೂಲವಾಗುವ ನಿರೀಕ್ಷೆಯಿದೆ. ಆ ಮೂಲಕ ಬ್ಯಾಂಕುಗಳ ಕೃಷಿ ಸಾಲಗಳ ಮರುಪಾವತಿಯೂ ಏರಬಹುದಾದ ಅವಕಾಶವಿದೆ.

### ಬ್ಯಾಂಕುಗಳ ಪುನರ್ ಸಂರಚನೆ

ಇದು ಈಚಿನ ದಿನಗಳಲ್ಲಿ ಬಹುವಾಗಿ ಕೇಳಿಬರುತ್ತಿರುವ ವಿಷಯ. ಈ ಬಾರಿಯ ಬಜೆಟ್‌ನಲ್ಲಿ ಇದನ್ನು ಪ್ರಮುಖ ಅಂಶವಾಗಿ ಪ್ರಸ್ತಾಪಿಸಿ ಹಣಕಾಸು ಸಚಿವರು ಬ್ಯಾಂಕುಗಳ ಪುನರ್ ಸಂರಚನೆಗೆ ಕೇಂದ್ರ ಸರ್ಕಾರ ಬದ್ಧವಾಗಿದೆಯೆಂದು ತಿಳಿಸಿದ್ದಾರೆ. ಜೊತೆಯಲ್ಲೆ ಬ್ಯಾಂಕಿಂಗ್ ವ್ಯವಸ್ಥೆಯ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವುದರೊಂದಿಗೆ, ಅವುಗಳ ವ್ಯವಹಾರಗಳು ಲಾಭದಾಯಕವಾಗಿರುವಂತೆ ಮಾಡಲು ಕಳೆದ ಬಾರಿಯಂತೆಯೇ ಈ ಬಾರಿಯೂ ಕೇಂದ್ರಸರ್ಕಾರ ರೂ. 5,600 ಕೋಟಿಗಳನ್ನು (ಕಳೆದ ಬಾರಿ ರೂ. 5,700 ಕೋಟಿ) ಬಿಡುಗಡೆ ಮಾಡಲಿದ್ದು ಇದನ್ನು ಬ್ಯಾಂಕುಗಳ ಬಂಡವಾಳ ಪರ್ಯಾಪ್ತತೆಯ ಸಾಧನೆಗಾಗಿ ಮತ್ತು ಅನುಮಾನಾಸ್ಪದ ಹಾಗೂ ಮರಳಿ ಬಾರದ ಸಾಲಗಳ ನಿರ್ವಹಣೆಗೆ ಬಳಸಿಕೊಳ್ಳಬಹುದೆಂದು ಸೂಚಿಸಲಾಗಿದೆ. ಈ ಹಣವನ್ನು ಸರ್ಕಾರಿ ಬಾಂಡುಗಳ ರೂಪದಲ್ಲಿ ಬಿಡುಗಡೆ ಮಾಡಲಿದ್ದು, ಇದಕ್ಕೆ ಬಡ್ಡಿ ಹಾಗೂ ಮರುಪಾವತಿಗೆ ತತ್‌ಕ್ಷಣದ ಅಗತ್ಯವಿಲ್ಲ. ಇದೇ ಅಲ್ಲದೆ ಸರ್ಕಾರ ರೂ. 314 ಕೋಟಿಗಳನ್ನು ರೈತರ ಸಾಲ ಮನ್ನಾ ಬಾಬತ್ತಿನಲ್ಲಿ ಬಿಡುಗಡೆ ಮಾಡಲಿದೆ.

### ಸಾಲ ವಸೂಲಿ ಮಂಡಲಿ

'ಮರುಪಾವತಿ' ಭಾರತೀಯ ಬ್ಯಾಂಕುಗಳು ಎದುರಿಸುತ್ತಿರುವ ಪ್ರಮುಖ ಸಮಸ್ಯೆಗಳಲ್ಲಿ ಒಂದು. ಈ ಸಮಸ್ಯೆಗೆ ಈ ಬಾರಿಯ ಬಜೆಟ್‌ನಲ್ಲಿ ಪರಿಹಾರವಿದೆ. ಅದೆಂದರೆ ವಿಶೇಷ ಸಾಲ ವಸೂಲಿ ನ್ಯಾಯ ಮಂಡಳಿ (Special Recovery Tribunal) ಸ್ಥಾಪನೆ. ಈ ವಸೂಲಿ ನ್ಯಾಯಮಂಡಲಿಯ ಸ್ಥಾಪನೆ ಸದ್ಯದಲ್ಲೆ ನಡೆದು ಅದು ಕಾರ್ಯಾರಂಭಮಾಡುವುದಾಗಿ ಹಣಕಾಸು ಸಚಿವರು ತಿಳಿಸಿದ್ದಾರೆ.

ಈ ಮಂಡಳಿ ಸ್ಥಾಪನೆಯಾದರೆ ಬ್ಯಾಂಕುಗಳಿಗೆ ಅನುಕೂಲವಾಗುತ್ತದೆ. ಇದೇ ಸಮಸ್ಯೆಯ ಮತ್ತೊಂದು ಪರಿಹಾರವಾಗಿ ಬ್ಯಾಂಕುಗಳು ಸಾಲ ನೀಡುವಾಗಲೇ ಎಚ್ಚರ ವಹಿಸಲು ಕೋರ್ಟಿನಲ್ಲಿರುವ ವಿಚಾರಣೆ ಎದುರಿಸುತ್ತಿರುವ ವಿವಿಧ ಬ್ಯಾಂಕುಗಳ ಸಾಲಗಾರರ ಒಂದು ಪಟ್ಟಿಯನ್ನು ರಿಸರ್ವ್ ಬ್ಯಾಂಕು ತಯಾರಿಸಿ ಅದನ್ನು ಎಲ್ಲಾ ಬ್ಯಾಂಕುಗಳಿಗೂ ಹಂಚಲಿದೆ. ಈ ಕ್ರಮದಿಂದ ಬ್ಯಾಂಕುಗಳು ಸಾಲ ನೀಡುವಾಗ ಎಚ್ಚರ ವಹಿಸಲು ಸಾಧ್ಯವಾಗುತ್ತದೆ.

ಈಚಿನ 'ಪ್ರತಿಭೂತಿ ಹಗರಣ'ದಂಥ ಹಗರಣಗಳು ಮರುಕಳಿಸದಂತೆ ಮಾಡಲು ರಿಸರ್ವ್ ಬ್ಯಾಂಕು, ಬ್ಯಾಂಕುಗಳ ಹಣಕಾಸು ಮೇಲ್ವಿಚಾರಣೆಗಾಗಿ ಮಂಡಳಿಯೊಂದನ್ನು ಸ್ಥಾಪಿಸಲಿದ್ದು ಅದು ಬ್ಯಾಂಕುಗಳ ಹಣಕಾಸು ವ್ಯವಹಾರಗಳನ್ನು ಕಟ್ಟುನಿಟ್ಟಾಗಿ ಪರಿಶೀಲಿಸಲಿದ್ದು ಬ್ಯಾಂಕುಗಳ ತಮ್ಮ ವ್ಯವಹಾರದ ಬಗ್ಗೆ ಸದಾ ಜಾಗರೂಕವಾಗಿರುವಂತೆ ಮಾಡಲಿದೆ.

### ಪರೋಕ್ಷ ಪರಿಣಾಮಗಳು

ಈ ಕ್ರಮಗಳೇ ಅಲ್ಲದೆ ಪರೋಕ್ಷವಾಗಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಪರಿಣಾಮವುಂಟುಮಾಡಬಹುದಾದ ಹಲವಾರು ಕ್ರಮಗಳು ಈ ಬಾರಿಯ ಬಜೆಟ್‌ನಲ್ಲಿವೆ. ಅವುಗಳೆಂದರೆ ಈ ವರೆಗೆ ನೋಂದಾಯಿತ ಮತ್ತು ನೋಂದಾಯಿತವಲ್ಲದ ಸಣ್ಣ ಕೈಗಾರಿಕೆಗಳಿಗೆ ರೂ.

75 ಲಕ್ಷ ಹಾಗೂ ರೂ. 30 ಲಕ್ಷದ ಅಬ್ಕಾರಿ ಸುಂಕದ ವಿನಾಯಿತಿ ಇತ್ತು. ಈಗ ಈ ತಾರತಮ್ಯವನ್ನು ಹೋಗಲಾಡಿಸಿ ಎರಡೂ ಬಗೆಯ ಕೈಗಾರಿಕೆಗಳಿಗೂ ರೂ. 75 ಲಕ್ಷದ ರಿಯಾಯಿತಿ ದೊರೆಯಲಿದೆ. ಸಣ್ಣ ಕೈಗಾರಿಕೆಗಳ ವಿಶೇಷ ಯೋಜನೆಯಲ್ಲಿ ಕಬ್ಬಿಣ, ಉಕ್ಕು, ಟೈರು, ಟ್ಯೂಬು, ಬಟ್ಟೆ ಮುಂತಾದುವನ್ನು ಸೇರಿಸಲಾಗಿದೆ. ಸಣ್ಣ ಕೈಗಾರಿಕೆಗಳು MODVAT ಉದರಿಯಂತೆ ವಿನಾಯಿತಿ ತೆಗೆದುಕೊಳ್ಳಲು ಅನುವಾಗುವಂತೆ ನಿಯಮಗಳನ್ನು ಬದಲಿಸಲಾಗಿದೆ. ಹಾಗೆಯೇ ದೊಡ್ಡ ಕಂಪನಿಗಳ ಹೆಸರಿನಲ್ಲಿ ಮಾರಾಟ ಮಾಡುವ ಸಣ್ಣ ಕೈಗಾರಿಕೆಗಳ ಉತ್ಪನ್ನಗಳಿಗೆ ಇನ್ನು ಮುಂದೆ ವಿನಾಯಿತಿ ಇರುವುದಿಲ್ಲ, ಹೀಗೆ ಕೈಗಾರಿಕೆಗಳಿಗೆ ಈ ಬಜೆಟ್‌ನಲ್ಲಿ ಹಲವಾರು ಪ್ರೋತ್ಸಾಹದಾಯಕ ಅಂಶಗಳಿವೆ. ಈ ಅಂಶಗಳಲ್ಲಿ ತೆರಿಗೆ ವಿನಾಯಿತಿ (ಕಂಪೆನಿ ತೆರಿಗೆಯಲ್ಲಿ ಇಳಿತ) ಹಾಗೂ ಸುಂಕದಲ್ಲಿ ಕಡಿತ ಹಾಗೂ ಕಚ್ಚಾವಸ್ತು ಪೂರೈಕೆಯಲ್ಲಿ ಹಲವಾರು ವಿನಾಯಿತಿಗಳಿವೆ. ಈ ಪ್ರೋತ್ಸಾಹಗಳಿಂದ ಕೈಗಾರಿಕೆಗಳು ಉನ್ನತಿ ಸಾಧಿಸಿದರೆ, ಪರೋಕ್ಷವಾಗಿ ಅವುಗಳಿಗೆ ಹಣಕಾಸು ಒದಗಿಸಿದ ಬ್ಯಾಂಕುಗಳು ಉನ್ನತಿ ಸಾಧಿಸಲು ಅವಕಾಶವಾಗುತ್ತದೆ.

### ರಿಯಾಯಿತಿಗಳು

ಆದರೆ, ಕೈಗಾರಿಕಾ ವಲಯಕ್ಕೇ ಅಲ್ಲದೆ ಈ ಬಜೆಟ್ಟಿನಲ್ಲಿ ಹಲವಾರು ಕ್ಷೇತ್ರಗಳಿಗೆ ಬಗೆಬಗೆಯ ರಿಯಾಯಿತಿ ತೋರಿಸಲಾಗಿದೆ. ಆದ್ದರಿಂದ ಅರ್ಥಶಾಸ್ತ್ರಜ್ಞರ ಅಭಿಪ್ರಾಯದಂತೆ ಇದು 'ಹಣದುಬ್ಬರಕ್ಕೆ ಮುಕ್ತ ಆಹ್ವಾನ ಕೊಡುವ ಬಜೆಟ್' ಎನಿಸಿಕೊಂಡಿದೆ. ಇದು ನಿಜವೇ ಆದಲ್ಲಿ ಹಣ ಪ್ರಸರಣ ಹೆಚ್ಚಿ, ಬ್ಯಾಂಕುಗಳ ಠೇವಣಿಗಳ ಮೇಲಿನ ಬಡ್ಡಿಗಳು ಇಳಿಯಬಹುದಾಗಿದೆ. ಆದರಿಂದ ಬ್ಯಾಂಕ್ ಠೇವಣಿಗಳು ಕುಗ್ಗಿ ಬ್ಯಾಂಕುಗಳ ಆದಾಯಕ್ಕೆ ವ್ಯತ್ಯಯವುಂಟಾಗಬಹುದಾಗಿದೆ. ಆದ್ದರಿಂದ ಠೇವಣಿ ಸಂಗ್ರಹಕ್ಕೆ ಹೆಚ್ಚಿನ ಗಮನ ನೀಡಬೇಕಾಗಬಹುದು. ಹಾಗೆಂದ ಮಾತ್ರಕ್ಕೆ ಬ್ಯಾಂಕುಗಳು ನಿರಾಳವಾಗಿರುವಂತೆಯೂ ಇಲ್ಲ. ಏಕೆಂದರೆ ಕೇಂದ್ರ ಸರ್ಕಾರ ವರ್ಷದ ಮಧ್ಯದಲ್ಲಿ ಯಾವಾಗ ಬೇಕಾದರೂ ಬಡ್ಡಿದರ ಹೆಚ್ಚಿಸುವ, ಇಳಿಸುವ ಇಲ್ಲವೇ ಹಣದುಬ್ಬರ ತಡೆಯಬಹುದಾದ ಕ್ರಮ ತೆಗೆದುಕೊಳ್ಳಬಹುದು. ಇದರಿಂದ ಬಜೆಟ್ ಗೌಣವೆನಿಸಿ ಬ್ಯಾಂಕುಗಳಿಗೆ ಯಾವಾಗಲೂ ತಮ್ಮ ಕಾರ್ಯಕ್ಷೇತ್ರದಲ್ಲಿ ಪ್ರಾವೀಣ್ಯ ಪಡೆದು ಲಾಭಪ್ರದತೆಯನ್ನು ಕಾಯ್ದುಕೊಳ್ಳುವುದೊಂದೇ ಇರುವ ಮಾರ್ಗ. ●

---



---

## ಕೇಂದ್ರ ಆಯ-ವ್ಯಯ : ಶ್ರೀಸಾಮಾನ್ಯನ ದೃಷ್ಟಿಯಲ್ಲಿ

[6ನೇ ಪುಟದಿಂದ ಮುಂದುವರಿದಿದೆ]

ಆದರೆ ಅದಕ್ಕನುಗುಣವಾಗಿ ಉತ್ಪಾದನೆಯಲ್ಲಿ ವೃದ್ಧಿಯಾಗಲಿಲ್ಲ. ಈ ವರ್ಷವಾದರೂ ಅಧಿಕ ಉತ್ಪಾದನೆ ಆದೀತೆಂದು ಆಶಿಸಲು ಕಾರಣಗಳಿಲ್ಲ. ಆದ್ದರಿಂದ ಈ ಕರ ವಿನಾಯ್ತಿಯಿಂದ ದೇಶದ ಅರ್ಥವ್ಯವಸ್ಥೆಗೆ ಏನೂ ಲಾಭವಾಗಲಾರದು.

* ಹಣದುಬ್ಬರ ತಡೆಗಟ್ಟಲು ರಿಸರ್ವ್ ಬ್ಯಾಂಕಿಂದಷ್ಟೇ ಸಾಲ ತೆಗೆದುಕೊಳ್ಳದಿದ್ದರೆ ಸಾಲದು, ಬೇರೆ ಬ್ಯಾಂಕುಗಳಿಂದಲೂ ಸಾಲ ತೆಗೆದುಕೊಳ್ಳಬಾರದು—ಆಗ ಮಾತ್ರ ಪರಿಣಾಮಕಾರಿಯಾದೀತು.

* ಬೆಲೆ ಏರಿಕೆ ಕಳೆದ ಮೂರು ವರ್ಷಗಳಲ್ಲಿ ಶೇ. 25 ಆಗಿದೆ. 1994-95ರ ಅಂತ್ಯಕ್ಕೆ ಇದು ಶೇ. 40ನ್ನೂ ದಾಟಲಿದೆ. ಹೊಸ ಆರ್ಥಿಕ ನೀತಿಯ ಈ ಪ್ರತಿಕೂಲ ಪರಿಣಾಮದಿಂದಾಗಿ ಬಡವರ ಮೇಲೆ ಭಾರೀ ಭಾರ ಬಿದ್ದಿದೆ. ಇದು ಸಾಮಾಜಿಕ ನ್ಯಾಯಕ್ಕೆ ವಿರುದ್ಧವಾದದ್ದು.

ಈ ತರಹದ ಅಭಿಪ್ರಾಯಗಳು ಪ್ರತಿವರ್ಷವೂ ಬರುತ್ತವೆ. ಹಾಗಾಗಿ ನಮ್ಮದೂ ಒಂದು ಅಭಿಪ್ರಾಯವನ್ನು ಇಲ್ಲಿ ಮಂಡಿಸಿದರೆ ಉಚಿತವಾದೀತು. ಈ ಮೊದಲೇ ತಿಳಿಸಿದಂತೆ ಬಜೆಟ್ ಕೊರತೆ ಹೆಚ್ಚಿದರೆ ಬೆಲೆ ಏರಿಕೆ ನಿಶ್ಚಯ. ಉತ್ಪಾದನೆ ಹೆಚ್ಚಾದಾಗ ಮಾತ್ರ ಬೆಲೆ ಏರಿಕೆ ಹತೋಟಿಯಲ್ಲಿದ್ದೀತು. ಶ್ರೀಸಾಮಾನ್ಯನ ಈ ಹಿಂದಿನ ಅನುಭವದ ಪ್ರಕಾರ ಬೆಲೆ ಏರಿಕೆ ಶೇ 10ನ್ನೂ ಮೀರುತ್ತದೆ.

ವಿವಿಧ ಅಂತರ್ರಾಷ್ಟ್ರೀಯ ಸಂಸ್ಥೆಗಳ ಒತ್ತಡ ನಮ್ಮ ಬಜೆಟ್ ಮೇಲೂ ಆಗುತ್ತಿದೆಯೆಂಬ ಆರೋಪಮಿಶ್ರಿತ ಕೂಗು ಕೇಳಿ ಬರುತ್ತಿದೆ. ಅದು ನಿಜವಾದರೆ, ಅದರಿಂದ ನಮಗೆ ಒಳಿತಿಲ್ಲ. ನಮ್ಮ ಉನ್ನತಿಯನ್ನು ಬಯಸದೇ ನಮ್ಮನ್ನು ತುಳಿಯಬೇಕೆಂದು ಸಂಚು ಹೂಡಿರುವ ಅಭಿವೃದ್ಧಿ ಹೊಂದಿದ ದೇಶಗಳನ್ನು ನಾವು ರಾಜಕೀಯ ಮುತ್ಸದ್ದಿತನ ಮತ್ತು ಜಾಣ್ಮೆಯಿಂದ ಎದುರಿಸಿ ನಿಲ್ಲಬೇಕಾಗಿದೆ. ನಮ್ಮ ಆದ್ಯತೆಗಳಿಗನುಗುಣವಾಗಿ ನಮ್ಮ ಬಜೆಟ್ ತಯಾರಿಸಿ, ನಮ್ಮ ಅರ್ಥವ್ಯವಸ್ಥೆಯಲ್ಲಿ ಶಿಸ್ತನ್ನೂ, ಬಿಗಿತನವನ್ನೂ ತರಲೇಬೇಕಾಗಿದೆ. ನಾವು ಹಾಕಿಕೊಳ್ಳುವ ಕಾರ್ಯಕ್ರಮಗಳನ್ನು ಸರಿಯಾಗಿ ಅನುಷ್ಠಾನಕ್ಕೆ ತಂದಾಗ ಮಾತ್ರ ನಿರೀಕ್ಷಿಸಿದ ಫಲ ದೊರೆಯಲು ಸಾಧ್ಯ. ●

# ಬ್ಯಾಂಕುಗಳ ವಿನಿಯೋಜನೆ: ಹೊಸ ದೃಷ್ಟಿಕೋನದ ಅಗತ್ಯ

**ಕೆ. ಎನ್. ಮಹಾಬಲ**
ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ

ಬದಲಾಗುತ್ತಿರುವ ಪರಿಸ್ಥಿತಿಯಲ್ಲಿ ಭಾರತದ ಬ್ಯಾಂಕುಗಳು ತಮ್ಮ ನಿಧಿಗಳನ್ನು ಪ್ರವಿಸ್ತಾರಣಗೊಳಿಸುವಲ್ಲಿ ದ್ರವತ್ವ, ಭದ್ರತೆ ಮತ್ತು ಲಾಭಪ್ರದತೆಗಳಿಗೆ ಮತ್ತೆ ಗಮನ ಹರಿಸಬೇಕಾಗಿ ಬಂದಿದೆ. ತಮ್ಮ ವಿನಿಯೋಜನಕ್ರಮವನ್ನು ವಿಸ್ತರಿಸುವುದೂ ಪುನಶ್ಚೇತನಗೊಳಿಸುವುದೂ ಅನಿವಾರ್ಯವಾಗಿದೆ. ಆದ್ಯತೆಗಳನ್ನು ಪುನರ್ವಿಮರ್ಶಿಸಿ ಪುನಃ ರೂಪಿಸಬೇಕಾಗಿದೆ.

ಬ್ಯಾಂಕಿಂಗ್ ವಿನಿಯಮನ ಅಧಿನಿಯಮ, 1949ರ ವ್ಯಾಖ್ಯೆಯಂತೆ ಬ್ಯಾಂಕಿಂಗ್ ಎಂದರೆ "ಸಾಲ ನೀಡಲು ಅಥವಾ ವಿನಿಯೋಜಿಸಲು ಸಾರ್ವಜನಿಕರಿಂದ ಠೇವಣಿ ಹಣವನ್ನು ಅವರು ಕೇಳಿದಾಗ ಮರುಪಾವತಿ ಮಾಡುವ ಷರತ್ತಿನಂತೆ ಸ್ವೀಕರಿಸುವುದು." ಇದರಂತೆ ಯಾವುದೇ ಸಂಸ್ಥೆ ಬ್ಯಾಂಕ್ ಎಂದು ಕರೆಸಿಕೊಳ್ಳಬೇಕಾದರೆ ಠೇವಣಿ ಸ್ವೀಕರಿಸಿ ಅದನ್ನು ಹೆಚ್ಚು ವರಮಾನ ತರುವ ಮಾರ್ಗಗಳಲ್ಲಿ ವಿನಿಯೋಜಿಸಬೇಕಾಗುತ್ತದೆ. ಒಂದು ಬ್ಯಾಂಕು ಸಾಮಾನ್ಯವಾಗಿ ಸ್ವೀಕರಿಸುವ ನಿಧಿಯನ್ನು ನಗದು ಅಥವಾ ರಿಸರ್ವ್ ಬ್ಯಾಂಕಿನ ಖಾತೆಯಲ್ಲಿ, ಕರೆಹಣ ಮಾರುಕಟ್ಟೆಯಲ್ಲಿ, ವಿನಿಯೋಜನೆಗಳಲ್ಲಿ, ಸಾಲಗಳಲ್ಲಿ ಮತ್ತು ಅಲ್ಪಾಂಶವನ್ನು ಕಟ್ಟಡಗಳಲ್ಲಿ, ಪೀಠೋಪಕರಣ ಹಾಗೂ ಇತರ ಉಪಕರಣಗಳಲ್ಲಿ ವಿನಿಯೋಜಿಸುತ್ತದೆ.

ತನ್ನ ಹೊಣೆ ಹಾಗೂ ಆಸ್ತಿಗಳ ನಡುವೆ ಕನಿಷ್ಠ ಶೇ. 4 ಬಡ್ಡಿ ಹರಹನ್ನು ಹೊಂದಲು ಬ್ಯಾಂಕುಗಳು ಯತ್ನಿಸುತ್ತವೆ. ನಿರ್ವಹಣೆ ವೆಚ್ಚಗಳನ್ನು ಭರಿಸಲು ಮತ್ತು ಸ್ವಲ್ಪಮಟ್ಟಿಗೆ ಕರಡುಸಾಲ ಹೊರೆ ತಗ್ಗಿಸಲು ಇದರಿಂದ ಸಾಧ್ಯ. ಇತ್ತೀಚಿನ ದಿನಗಳಲ್ಲಿ ಈ ಬಡ್ಡಿ ಹರಹು ಹಲವಾರು ಒತ್ತಡಗಳಿಗೆ ಪಕ್ಕಾಗುತ್ತಿದೆ. ಸಾಲ ಹಾಗೂ ಠೇವಣಿಗಳ ಮೇಲೆ ವಿಧಿಸಲಾಗುವ ಬಡ್ಡಿದರಗಳ ಸತತ ಇಳಿಕೆಯಿಂದಾಗಿ ಬಡ್ಡಿ ಹರಹು ಸಂಕುಚಿತಗೊಳ್ಳುತ್ತಿದೆ.

ರಿಸರ್ವ್ ಬ್ಯಾಂಕ್ ಬಡ್ಡಿದರ, ನಿಷ್ಕ್ರಿಯ ಆಸ್ತಿಗಳಿಗೆ ಮುನ್ನೇರ್ಪಾಡು, ಆದಾಯ ಮಾನ್ಯತೆಯ ಹೊಸ ಮಾನದಂಡ ಈ ಮುಂತಾದುವು ಬ್ಯಾಂಕುಗಳನ್ನು ಬಹುವಾಗಿ ಬಾಧಿಸಿವೆ. ಕೇಂದ್ರ ಸರಕಾರ ಈ ಹಿಂದೆ ಬ್ಯಾಂಕುಗಳ ನಷ್ಟ ಭರಿಸಲು ಬಂಡವಾಳ ಸಹಾಯ ನೀಡುತ್ತಿತ್ತು. ಆದರೆ ಈಗ ಪರಿಸ್ಥಿತಿ ಹಾಗಿಲ್ಲ. ಬ್ಯಾಂಕುಗಳು ಬಂಡವಾಳ ಪರ್ಯಾಪ್ತತೆ ಹೊಂದಲು ಸಹಾಯಹಸ್ತ ಚಾಚಿದ್ದರೂ ಪ್ರತಿಯಾಗಿ ಗುಣಮಟ್ಟ ಸಾಧನೆಗೆ ಕಾಲಬದ್ಧ ಕಾರ್ಯಕ್ರಮ ಹೊಂದಬೇಕೆಂದು ಆಶಿಸುತ್ತದೆ. ಈ ನಿಟ್ಟಿನಲ್ಲಿ ಬ್ಯಾಂಕುಗಳು ಈಗಾಗಲೇ ಒಪ್ಪಂದ ಪತ್ರಕ್ಕೆ ಸಹಿ ಹಾಕಿವೆ. ಇವುಗಳಲ್ಲಿ ಒಂದು, ಬ್ಯಾಂಕುಗಳು ತಮ್ಮ ನಿಧಿಗಳ ವಿನಿಯೋಜನೆಯ ಬಗ್ಗೆ ವಿಶೇಷ ಗಮನ ನೀಡಬೇಕಾಗಿರುವುದು.

ಈ ನಿಟ್ಟಿನಲ್ಲಿ ಎಲ್ಲೋ ಕೆಲವು ಬ್ಯಾಂಕುಗಳು ಮಾತ್ರ ಅಗತ್ಯವಾದ ವೃತ್ತಿನೈಪುಣ್ಯವನ್ನೂ ಸಂಪನ್ಮೂಲವನ್ನೂ ಹೊಂದಿವೆ. ಉಳಿದಂತೆ ಬಹುಪಾಲು ಬ್ಯಾಂಕುಗಳು ದುರ್ಬಲವಾದ ಅಧೋರಚನೆಯನ್ನು ಹೊಂದಿವೆ. ಬ್ಯಾಂಕುಗಳು ಎರಡು ಸಾಂಪ್ರದಾಯಿಕ ವಿನಿಯೋಜನಾ ಕ್ಷೇತ್ರಗಳಾದ ಸಾಲ ನೀಡಿಕೆ ಹಾಗೂ ಕರೆಹಣ ಮಾರುಕಟ್ಟೆಗಳನ್ನು ಮಾತ್ರ ಅವಲಂಬಿಸಿವೆ. ಸಾಲಕ್ಕೆ ಸುಮಾರು 14% ಮತ್ತು ಅಂತರ ಬ್ಯಾಂಕ್ ಕರೆಹಣದರ ಶೇ. 5-6ರಷ್ಟು ಕಡಿಮೆ ಇದ್ದು ಬ್ಯಾಂಕುಗಳು ಸಂದಿಗ್ಧ ಸ್ಥಿತಿ ತಲುಪಿವೆ.

ಠೇವಣಿ ಸಂಗ್ರಹ ಹೆಚ್ಚುತ್ತಾ, ವಸೂಲಾತಿ ಪರಿಸ್ಥಿತಿ ಉತ್ತಮಗೊಂಡು ಬ್ಯಾಂಕುಗಳಲ್ಲಿ ನಿಧಿ ಹರಿವು ಉತ್ತೇಜನಕರವಾಗಿದೆ. ಕೈಗಾರಿಕೆಗಳಲ್ಲಿನ ಸಾಮಾನ್ಯವಾದ ಹಿಂಜರಿತದ ಪ್ರವೃತ್ತಿಯಿಂದಾಗಿ ಉದರಿ ಬಳಕೆ ಕಡಿಮೆಯಾಗಿದೆ. ಬ್ಯಾಂಕುಗಳು ತಾವು ಪಡೆದ ಠೇವಣಿಗಿಂತ ಹೆಚ್ಚು ವರಮಾನ ಸಂಪಾದಿಸಿ ಲಾಭಪ್ರದತೆಯನ್ನು ಕಾಯ್ದುಕೊಳ್ಳಬೇಕಾಗಿದೆ. ಅದೇ ಸಮಯದಲ್ಲಿ ವಿನಿಯೋಜನೆಯ ಇನ್ನೆರಡು ಮೂಲಭೂತ ಸೂತ್ರಗಳಾದ ಸುರಕ್ಷತೆ ಹಾಗೂ ದ್ರವತ್ವಗಳಿಗೂ ಮಹತ್ವ ನೀಡಬೇಕಾಗಿದೆ.

## ವಿನಿಯೋಜನೆಯ ಮಾರ್ಗಗಳು

**ಠೇವಣಿ ಪತ್ರಗಳು :** ಯಾವುದೇ ಬ್ಯಾಂಕ್ ತನ್ನ ಒಟ್ಟು ತಗಾದೆ ಹಾಗೂ ಸಾವಧಿ ಹೊಣೆಗಳ ಶೇ. 10ಕ್ಕಿಂತ ಹೆಚ್ಚು ಮೊತ್ತದ ಠೇವಣಿ ಪತ್ರ ಹೊಂದಬಾರದು ಎಂಬ ನಿರ್ಬಂಧವನ್ನು

ಈಗ ರಿಸರ್ವ್ ಬ್ಯಾಂಕ್ ತೆಗೆದುಹಾಕಿರುವುದರಿಂದ ಬ್ಯಾಂಕುಗಳು ಅಗತ್ಯವಿದ್ದಾಗಲೆಲ್ಲ ಮಾರುಕಟ್ಟೆ ಬಡ್ಡಿದರದಲ್ಲಿ ಠೇವಣಿ ಪತ್ರದ ಮೂಲಕ ನಿಧಿ ಸಂಗ್ರಹಿಸಬಹುದಾಗಿದೆ. ಸಮೃದ್ಧ ಹಣ ಹೊಂದಿರುವ ಬ್ಯಾಂಕೊಂದು ಸಾರ್ವಜನಿಕರಿಂದ ಶೇ. 8-9ರ ದರದಲ್ಲಿ ಠೇವಣಿ ಸಂಗ್ರಹಿಸಿ ನಿಧಿ ಅಗತ್ಯವಿರುವ ಬ್ಯಾಂಕುಗಳಿಗೆ ಶೇ. 11-12ರ ದರದಲ್ಲಿ ನೀಡಿ ಸುಮಾರು ಶೇ. 3ರ ಬಡ್ಡಿ ಅಂತರ ಹೊಂದಬಹುದಾಗಿದೆ.

ಠೇವಣಿ ಪತ್ರ ವಿನಿಯೋಜನೆಯಿಂದ ಹಲವಾರು ಪ್ರಯೋಜನಗಳಿವೆ. ಅವು ಒಂದಿಷ್ಟೂ ನಷ್ಟಭಯವಿಲ್ಲದ ಆಸ್ತಿಗಳಾಗಿದ್ದು, ಬಂಡವಾಳ ಪರ್ಯಾಪ್ತತೆ ನಿರ್ಧರಿಸುವಾಗ ಗಣನೆಗೆ ಬರುವುದಿಲ್ಲ. ಮೇಲಾಗಿ ಇವನ್ನು ಉತ್ತಮ ದರ್ಜೆಯ ಆಸ್ತಿಗಳೆಂದು ಪರಿಗಣಿಸಲಾಗಿದೆ. ಆದ್ದರಿಂದ ಮುನ್ನೇರ್ಪಾಟು ಅವಶ್ಯಕವಿಲ್ಲ. ಆದರೆ ಪ್ರಸ್ತುತ ಮಾರುಕಟ್ಟೆ ಬಡ್ಡಿದರ ತೀರಾ ಕಡಿಮೆಯಿರುವುದರಿಂದ ಠೇವಣಿ ಪತ್ರಗಳ ಬೇಡಿಕೆ ಕುಸಿದಿದೆ. ಆದರೆ ಇದು ಕೇವಲ ತಾತ್ಕಾಲಿಕ ಪ್ರವೃತ್ತಿಯಾಗಿದ್ದು ಠೇವಣಿ ಪತ್ರಗಳು ಬ್ಯಾಂಕುಗಳ ಸದಾ ಕಾಲದ ಸುಭದ್ರ ವಿನಿಯೋಜನ ಸಂಲೇಖಗಳಾಗಿವೆ.

**ವಾಣಿಜ್ಯಪ್ರತಗಳು :** ರಿಸರ್ವ್ ಬ್ಯಾಂಕ್ ವಾಣಿಜ್ಯಪತ್ರದ ವಿಷಯದ ಮಾರ್ಗದರ್ಶಿ ಸೂತ್ರಗಳನ್ನು ಪ್ರಗತಿಶೀಲವಾಗಿ ವಿನಾಯಿತಿಗೊಳಿಸುತ್ತಿದೆ. ಇತ್ತೀಚಿನ ದಿನಗಳಲ್ಲಿ ಹೆಚ್ಚುಹೆಚ್ಚು ಕಂಪನಿಗಳು ವಾಣಿಜ್ಯಪತ್ರ ಮಾರುಕಟ್ಟೆ ಪ್ರವೇಶಿಸುತ್ತ, ಚೈತನ್ಯಶೀಲಗೊಳಿಸಿದೆ. ಬ್ಯಾಂಕುಗಳು ಸಾಲದ ಮೇಲೆ ವಿಧಿಸುವ ಬಡ್ಡಿದರಕ್ಕೂ ವಾಣಿಜ್ಯಪತ್ರದ ಮೇಲಿನ ದರಕ್ಕೂ ಕನಿಷ್ಠ ಶೇ. 4 ಅಂತರದ ಖಾತರಿಯಿದೆ. ವಾಣಿಜ್ಯಪತ್ರಗಳ ಮೊತ್ತದ ಮಿತಿಯನ್ನು ನಿಧಿ ಆಧಾರಿತ ಚಾಲ್ತಿ ಬಂಡವಾಳದ ಶೇ. 75ಕ್ಕೆ ಹೆಚ್ಚಿಸಿರುವುದರಿಂದ ಕಂಪನಿಗಳು ಬ್ಯಾಂಕ್ ಸಾಲಕ್ಕಿಂತ ವಾಣಿಜ್ಯ ಪತ್ರಗಳನ್ನು ಬಯಸುತ್ತಿವೆ. ವಾಣಿಜ್ಯ ಪತ್ರಗಳ ಪಕ್ವತಾ ಅವಧಿಯನ್ನು ಒಂದು ವರ್ಷಕ್ಕೆ ವಿಸ್ತರಿಸಿರುವುದರಿಂದ ಕ್ರಿಯಾಶೀಲ ದ್ವಿತೀಯಕ ಮಾರುಕಟ್ಟೆಯ ವಿಕಾಸಕ್ಕೂ ಅನುಕೂಲವಾಗಿದೆ.

ವಾಣಿಜ್ಯಪತ್ರ ನೀಡಿಕೆಯಾಗುವಷ್ಟು ಮೊತ್ತದ ಬ್ಯಾಂಕ್ ಉದರಿ ಕಡಿಮೆಯಾಗುವುದರಿಂದ ಬ್ಯಾಂಕುಗಳು ತಮ್ಮ ಹೆಚ್ಚುವರಿ ಹಣವನ್ನು ಶೇ. 11-12 ವರಮಾನ ತರಬಲ್ಲ ವಾಣಿಜ್ಯಪತ್ರಗಳಲ್ಲಿ ತೊಡಗಿಸಬಹುದಾಗಿದೆ. ವಾಣಿಜ್ಯ ಪತ್ರಗಳ ಸುಲಭ ಪರಕ್ರಾಮ್ಯಕ್ಕೆ ಬ್ಯಾಂಕುಗಳು ತಮ್ಮ ವಿನಿಯೋಜನ ಮಟ್ಟವನ್ನು ಸುಲಭವಾಗಿ ಹೊಂದಿಸಿಕೊಳ್ಳಲು ಅನುವಾಗುತ್ತದೆ. ಹಲವಾರು ಬ್ಯಾಂಕುಗಳು ವಾಣಿಜ್ಯಪತ್ರ ನೀಡುವ ಕಂಪನಿಯೊಡನೆ ಇಡೀ ನೀಡಿಕೆ ಬಗ್ಗೆ ವ್ಯವಹರಿಸಿ ನಿರ್ಧರಿಸಲಾದ ದರವೊಂದರಲ್ಲಿ ವಾಣಿಜ್ಯಪತ್ರ ಪಡೆಯಲು ಒಪ್ಪಂದ ಮಾಡಿಕೊಳ್ಳುವುದೂ ಕಂಡುಬಂದಿದೆ. ಇದೇ ಪ್ರವೃತ್ತಿ ಮುಂದುವರಿದರೆ ಬ್ಯಾಂಕುಗಳು ಕಂಪನಿಗಳಿಗೆ ಸಾಲ ನೀಡುವ ಸಮಯದಲ್ಲೇ ಉತ್ತಮ ದರದಲ್ಲಿ ವಾಣಿಜ್ಯಪತ್ರ ಹೊಂದುವ ಬಗ್ಗೆ ಕರಾರು ಮಾಡಿಕೊಂಡರೆ ಆಶ್ಚರ್ಯವೇನಿಲ್ಲ.

**ಖಜಾನೆ ಹುಂಡಿಗಳು :** ಖಜಾನೆ ಹುಂಡಿಗಳು ಸಾಂಪ್ರದಾಯಿಕ ವಿನಿಯೋಜನ ಮಾರ್ಗಗಳೆನಿಸಿವೆ. ಬ್ಯಾಂಕುಗಳು ಸಾಮಾನ್ಯವಾಗಿ ತಮ್ಮ ಪರಿನಿಯುತ ದ್ರವತ್ವ ಅಗತ್ಯಗಳನ್ನು ಪಾಲಿಸಲು ಇದನ್ನು ಆಶ್ರಯಿಸುತ್ತದೆ. ವಾಘುಲ್ ಸಮಿತಿ ಶಿಫಾರಸಿನ ಅನ್ವಯ 182 ದಿನಗಳ ಖಜಾನೆಹುಂಡಿ ಜಾರಿಗೆ ಬಂದು, ಬ್ಯಾಂಕ್ ವಿನಿಯೋಜನೆಗೆ ನಮ್ಯತೆಯ ಗುಣವನ್ನು ತಂದಿದೆ.

ಪ್ರಸ್ತುತ ಖಜಾನೆ ಹುಂಡಿ ಪ್ರತಿಫಲ ದರ ಶೇ. 12.5ರಿಂದ 13 ಇದ್ದು ಎರಡು ವರ್ಷದ ಹಿಂದಿನ ದರವಾದ ಶೇ. 10-11ಕ್ಕಿಂತ ಆರೋಗ್ಯಕರವಾದ ಬೆಳವಣಿಗೆಯಾಗಿದೆ. ನರಸಿಂಹಂ ಸಮಿತಿಯ ಶಿಫಾರಸಿನನ್ವಯ ರಿಸರ್ವ್ ಬ್ಯಾಂಕ್ ಪರಿನಿಯುತ ದ್ರವತ್ವ ಅನುಪಾತವನ್ನು ಕಡಿಮೆಗೊಳಿಸಿ ಅದು ಈಗ ಶೇ. 34.75, ವೃದ್ಧಿತ ಪರಿನಿಯುತ್ವ ದ್ರವತ್ವ ಅಗತ್ಯ ಶೇ. 25 ಇದೆ. ಆದಾಗ್ಯೂ ಪರಿನಿಯುತ ದ್ರವತ್ವ ಅನುಪಾತ ಕೆಲವು ಬ್ಯಾಂಕುಗಳಲ್ಲಿ ಗಮನಾರ್ಹವಾಗಿ ಹೆಚ್ಚಿದೆ. ಖಜಾನೆ ಹುಂಡಿಗಳು ನಷ್ಟಭಯವಿಲ್ಲದ ಶೇ. 100ರಷ್ಟು ವಸೂಲಾತಿ ಖಾತರಿಯ ವಿನಿಯೋಜನ ಮಾರ್ಗವಾದುದರಿಂದ ಅದು ಶೇ. 70 ವಸೂಲಾತಿಯಿರುವ ಶೇ. 18 ಬಡ್ಡಿದರ ಸಾಲಕ್ಕೆ ಸಮನಾಗಿದೆ ಎನ್ನಲಾಗಿದೆ.

ಮತ್ತೊಂದು ಅನುಕೂಲವೆಂದರೆ ಬಂಡವಾಳ ಪರ್ಯಾಪ್ತತೆ ನಿರ್ಧರಿಸುವ ಆಸ್ತಿಗಳ ಪರಿಧಿಯಲ್ಲಿ ಖಜಾನೆ ಹುಂಡಿಗಳು ಬರುವುದಿಲ್ಲ. ಕ್ರಿಯಾಶೀಲ ಆಸ್ತಿಗಳಾದುದರಿಂದ ಮುನ್ನೇರ್ಪಾಡಿನ ಭಯವೂ ಇಲ್ಲ. ಹೀಗಾಗಿ ಖಜಾನೆ ಹುಂಡಿಗಳು ವಿನಿಯೋಜನೆ ಸಂಲೇಖಗಳಲ್ಲೇ ವಿಶಿಷ್ಟಸ್ಥಾನ ಪಡೆದಿವೆ.

**ಕರೆ ಹಣ ಮಾರುಕಟ್ಟೆ :** ಕಳೆದ ವರ್ಷ ವಿಪರೀತ ಅಸ್ಥಿರ ಬದಲಾವಣೆಗಳಿಗೆ ಪಕ್ಕಾಗಿದ್ದ ಈ ಮಾರುಕಟ್ಟೆ ಇದ್ದಕ್ಕಿದ್ದಂತೆ ಈಗ ನಿಷ್ಕ್ರಿಯಗೊಂಡಿದೆ. ವಾಘುಲ್ ಸಮಿತಿ ಅಂತರ ಬ್ಯಾಂಕ್ ಬಡ್ಡಿದರ ಮಿತಿ ತೊಡೆದುಹಾಕಲು ಶಿಫಾರಸು ಮಾಡಿದ ಆರಂಭದಲ್ಲಿ ಕರೆಹಣ ಮಾರುಕಟ್ಟೆಯಲ್ಲಿ ಬಡ್ಡಿದರ ಉತ್ಕರ್ಷ ಹೊಂದಿ ಶೇ. 80ರಷ್ಟು ತಲುಪಿ ದಾಖಲೆ ಸ್ಥಾಪಿಸಿತು.ಆದರೆ ಕಳೆದ ಆರು ತಿಂಗಳಲ್ಲಿ ಅದು ಶೇ. 15-20ರ ಮಿತಿಯಲ್ಲೇ ಸಂಚರಿಸುತ್ತಿದೆ.

### ಬಡ್ಡಿ ದರ

ಬ್ಯಾಂಕುಗಳು ಈಗ ಮಾರುಕಟ್ಟೆಯಲ್ಲಿ ಸಾಲ ನೀಡಲು ಬಡ್ಡಿದರ ಆಕರ್ಷಕವಾಗಿಲ್ಲ. ಬಿರುಸಿನ ಅವಧಿಯ ಉದರಿ ನೀತಿಯನ್ವಯ ಇತರೆ ಹಣಕಾಸು ಸಂಸ್ಥೆಗಳು ಮಾರುಕಟ್ಟೆ ದರದಲ್ಲಿ ಸಾಲ ಪಡೆಯಬಹುದಾಗಿದೆ. ಇದರಿಂದ ಮಾರುಕಟ್ಟೆ ಉತ್ತೇಜನಗೊಂಡು ಕನಿಷ್ಠ ಶೇ. 15 ಬಡ್ಡಿ ಲಭಿಸಿದರೆ ಬ್ಯಾಂಕುಗಳಿಗೆ ಉತ್ತಮ.

ಷೇರು ಹಗರಣಕ್ಕೂ ಮೊದಲು ಬಂಡವಾಳ ಮಾರುಕಟ್ಟೆ ಬ್ಯಾಂಕುಗಳ ನೆಚ್ಚಿನ ವಿನಿಯೋಜನ ಕ್ಷೇತ್ರವಾಗಿತ್ತು. ಷೇರು ಹಗರಣದ ಕಹಿ ಅನುಭವದಿಂದಾಗಿ ಬ್ಯಾಂಕುಗಳು ಷೇರುಮಾರು

[14ನೇ ಪುಟ ನೋಡಿ]

# ಕರೆನ್ಸಿ ಬದಲಿ-ಆಯ್ಕೆ ಸೌಲಭ್ಯ

ಟಿ. ಕೆ. ರಂಗನಾಥ
ಮುಖ್ಯ ವ್ಯವಸ್ಥಾಪಕ, ವಲಯ ಕಛೇರಿ, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಗುವಾಹತಿ

**ರೂಪಾಯಿಯ ವಿನಿಮಯ ದರಗಳು ಅನಿಶ್ಚಿತವಾಗಿರುವ ಈ ದಿನಗಳಲ್ಲಿ ವಿದೇಶೀಯನೊಬ್ಬನೊಂದಿಗೆ ನಿಶ್ಚಿತ ಬೆಲೆಯಲ್ಲಿ ಸರಕನ್ನು ಮಾರಲು ಒಪ್ಪಂದ ಮಾಡಿಕೊಂಡ ವ್ಯಾಪಾರಿಗೆ ಈ ಏರಿಳಿತಗಳಿಂದ ಬಾಧೆಯಾಗದಿರಲು ಏನು ಮಾಡಬೇಕು ? ಗಜಪತಿರಾಯರ ಉಪಾಯವನ್ನು ಓದಿ.**

ಈ ವರುಷದ ಮೊದಲ ದಿನದಿಂದ ಭಾರತದ ರಫ್ತು ಹಾಗೂ ಆಮದುದಾರರಿಗೆ ತಮ್ಮ ವಿದೇಶಿ ವ್ಯವಹಾರವನ್ನು ಮತ್ತಷ್ಟು ಲಾಭಪ್ರದವಾಗಿಸಲು ನೆರವಾಗುವ "ಕರೆನ್ಸಿ ಬದಲಿ-ಆಯ್ಕೆ" ಸೌಲಭ್ಯ ನೀಡಲು ಅಧಿಕೃತ ವಹಿವಾಟುದಾರರಿಗೆ ಭಾರತೀಯ ರಿಸರ್ವ್ ಬ್ಯಾಂಕ್ ಅನುಮತಿ ನೀಡಿದುದನ್ನು ಅನೇಕರು ಪತ್ರಿಕೆಗಳಲ್ಲಿ ಓದಿರಬಹುದು. ಈ ತೆರನ ಮೊದಲ ವಹಿವಾಟನ್ನು ಜನವರಿ ಒಂದರಂದೇ ಭಾರತೀಯ ಸ್ಟೇಟ್ ಬ್ಯಾಂಕ್ ತನ್ನ ಗ್ರಾಹಕರೊಬ್ಬರಿಗೆ ಹತ್ತು ಲಕ್ಷ ಡಾಯಿಷ್ ಮಾರ್ಕ್‌ಗಳನ್ನು 3 ತಿಂಗಳ ನಂತರ ಪ್ರತಿ ಅಮೆರಿಕಾ ಡಾಲರಿಗೆ 1.7450 ಮಾರಲು 'ಕರೆನ್ಸಿ ಬದಲಿ-ಆಯ್ಕೆ' ನೀಡುವುದರ ಮೂಲಕ ಆರಂಭಿಸಿತು. ಈ ಸೌಲಭ್ಯಕ್ಕಾಗಿ ಗ್ರಾಹಕ ಡಾಲರ್ ಮೊತ್ತದ ಶೇ 2.5ರಷ್ಟನ್ನು ಶುಲ್ಕವಾಗಿ ನೀಡಬೇಕಾಯಿತು. ಆದರೆ ಇದರಿಂದ ಗ್ರಾಹಕನಿಗೆ ದೊರೆತ ಲಾಭವೇನು ಎಂದು ನಿಮಗನಿಸಬಹುದು. ಗ್ರಾಹಕ ಈ ಒಪ್ಪಂದದ ಮೇರೆಗೆ ಮಾರ್ಚ್ 31ರಂದು ಹತ್ತು ಲಕ್ಷ ಡಾಯಿಸ್ ಮಾರ್ಕ್‌ಗಳನ್ನು ಪ್ರತಿ ಡಾಲರಿಗೆ 1.7450 ಡಾಯಿಷ್ ಮಾರ್ಕ್ಸ್‌ನಂತೆ ಖರೀದಿಸುವ ಹಕ್ಕು ಹೊಂದಿರುತ್ತಾನೆ. ಆದರೆ ಖರೀದಿಸುವುದು ಬಿಡುವುದು ಗ್ರಾಹಕನಿಗೆ ಬಿಟ್ಟದ್ದು. ಗ್ರಾಹಕ ಕೊಳ್ಳಬಯಸಿದರೆ ಭಾರತೀಯ ಸ್ಟೇಟ್ ಬ್ಯಾಂಕ್ ಹತ್ತು ಲಕ್ಷ ಡಾಯಿಷ್ ಮಾರ್ಕ್‌ಗಳನ್ನು ನೀಡಲೇಬೇಕು.

ರಫ್ತು ಆಮದು ಉದ್ಯಮದಲ್ಲಿ ತೊಡಗಿರುವವರು ತಮ್ಮ ಸರಕನ್ನು ಮಾರುವಾಗ ಅಥವಾ ಕೊಳ್ಳುವಾಗ ಸರಕಿನ ಬೆಲೆಯನ್ನು ವಿದೇಶಿ ಕರೆನ್ಸಿಯಲ್ಲಿ ಸ್ವೀಕರಿಸಬೇಕಾಗುತ್ತದೆ/ನೀಡಬೇಕಾಗುತ್ತದೆ. ತಾವು ಪಡೆದ ವಿದೇಶಿ ಕರೆನ್ಸಿಯನ್ನು ಸ್ಥಳೀಯ ಕರೆನ್ಸಿಗೆ ಪರಿವರ್ತಿಸುವ ವಿನಿಮಯದರ ದಿನದಿಂದ ದಿನಕ್ಕೆ, ಏಕೆ, ನಿಮಿಷ ನಿಮಿಷಕ್ಕೂ ಬದಲಾಗುತ್ತದೆ. ವಹಿವಾಟುದಾರರ ದೇಶಗಳ ಪಾವತಿ ಶಿಲ್ಕು. ಆರ್ಥಿಕ ನೀತಿ (ಪ್ರಚಲಿತ ಬಡ್ಡಿ ಹಾಗೂ ತೆರಿಗೆ ದರಗಳು) ಹಾಗೂ ವ್ಯಾಪಾರ ಧೋರಣೆಗಳ ಮೇಲೆ ವಿನಿಮಯದರ ವ್ಯತ್ಯಾಸ ಹೊಂದುತ್ತದೆ. ಆದರೆ ರಫ್ತುದಾರರು ತಮ್ಮ ಮಾಲಿನ ಬೆಲೆಯನ್ನು ತಿಳಿಸುವಾಗ ವಹಿವಾಟು ಪೂರ್ಣಗೊಂಡು ಹಣ ಸಂದಾಯವಾಗುವ ದಿನದಂದು ಇರಬಹುದಾದ ವಿನಿಮಯದರವನ್ನು ಲೆಕ್ಕಹಾಕಿ ಸರಕನ್ನು ಸಿದ್ಧಪಡಿಸಲು ತಮಗೆ ತಗಲುವ ವೆಚ್ಚವನ್ನು ಹಾಗೂ ತಮ್ಮ ಲಾಭವನ್ನು ಸೇರಿಸಿ ದರವನ್ನು ತಿಳಿಸಬೇಕಾಗುತ್ತದೆ. ಇಂತಹ ಸಮಯದಲ್ಲಿ ಆಗಬಹುದಾದ ಹಾನಿಯಿಂದ ತಮ್ಮನ್ನು ರಕ್ಷಿಸಿಕೊಳ್ಳಲು ರಫ್ತುದಾರರು ತಮ್ಮ ಬ್ಯಾಂಕರನೊಂದಿಗೆ **ವಾಯಿದಾ ಕರಾರು** ಮಾಡಿಕೊಳ್ಳುವ ಮೂಲಕ ತಮಗೆ ದೊರಕುವ ಮೊಬಲಗನ್ನು ಖಚಿತಗೊಳಿಸಿಕೊಳ್ಳುತ್ತಾರೆ. ವಾಯಿದಾ ಕರಾರು ಮಾಡಿಕೊಂಡರೆ ನಿರ್ದಿಷ್ಟ ದಿನದಂದು ಕರಾರಿನಂತೆ ನಿರ್ದಿಷ್ಟ ಮೊತ್ತದ ವಿದೇಶಿ ಕರೆನ್ಸಿ ನೀಡಲು ಬದ್ಧನಾಗಿರುತ್ತಾನೆ. ಆ ದಿನದಂದು ಯಾವುದೇ ಕಾರಣದಿಂದ ರಫ್ತುದಾರ ವಿದೇಶಿ ಕರೆನ್ಸಿ ನೀಡಲು ವಿಫಲನಾದರೆ ಬ್ಯಾಂಕ್ ಅಂದಿನ ದರದಲ್ಲಿ ಮಾರುಕಟ್ಟೆಯಿಂದ ಅಷ್ಟು ಮೊತ್ತದ ವಿದೇಶಿ ಕರೆನ್ಸಿ ಖರೀದಿಸಿ ಅದರಿಂದ ಉಂಟಾಗುವ ಲಾಭ/ನಷ್ಟವನ್ನು ರಫ್ತುದಾರನಿಗೆ ವರ್ಗಾಯಿಸುತ್ತದೆ. ಅನಂತರ ವಿದೇಶಿ ಕರೆನ್ಸಿ ದೊರೆತಾಗ ಅಂದಿನ ಮಾರುಕಟ್ಟೆ ದರದಲ್ಲಿ ಅದನ್ನು ಸ್ಥಳೀಯ ಹಣಕ್ಕೆ ಪರಿವರ್ತಿಸಬೇಕಾಗುತ್ತದೆ. ನಿರ್ದಿಷ್ಟ ದಿನದಂದು ಮಾರುಕಟ್ಟೆಯ ದರ ಹೆಚ್ಚಿದಲ್ಲಿ ಅದರ ಲಾಭ ರಫ್ತುದಾರನಿಗೆ ದೊರಕುವುದಿಲ್ಲ. ಆಮದುದಾರರಿಗೆ ಈ ವಾಯಿದಾ ಸೌಲಭ್ಯ ವಿರುದ್ಧ ದಿಕ್ಕಿನಲ್ಲಿ ಪ್ರಭಾವ ಬೀರುತ್ತದೆ. ವಾಯಿದಾ ಕರಾರಿನಂತೆ ನಿರ್ದಿಷ್ಟ ದಿನದಂದು ನಿರ್ದಿಷ್ಟ ಮೊತ್ತದ ವಿದೇಶಿ ಕರೆನ್ಸಿಯನ್ನು ಪೂರ್ವನಿಶ್ಚಿತ ದರದಲ್ಲಿ ಮಾರಲು ಬ್ಯಾಂಕ್ ಹಾಗೂ ಕೊಳ್ಳಲು ಆಮದುದಾರ ಬದ್ಧರಾಗಿರುತ್ತಾರೆ. ಅಂದು ಆಮದುದಾರ ವಿದೇಶಿ ಕರೆನ್ಸಿ ಕೊಳ್ಳದಿದ್ದರೆ ಬ್ಯಾಂಕ್ ಅಂದಿನ ಮಾರುಕಟ್ಟೆ ದರದಲ್ಲಿ ಮಾರಿ ಅದರಿಂದ ತನಗಾದ ನಷ್ಟವನ್ನು ಆಮದುದಾರನಿಂದ ವಸೂಲು ಮಾಡುತ್ತದೆ. ವಾಯಿದಾ ಕರಾರು ಹಾಗೂ ಕರೆನ್ಸಿ ಬದಲಿ ಆಯ್ಕೆ ಸೌಲಭ್ಯದ ನಡುವಣ ವ್ಯತ್ಯಾಸವನ್ನು ಒಂದು ಉದಾಹರಣೆಯ ಮೂಲಕ ಮತ್ತಷ್ಟು ಸ್ಪಷ್ಟಗೊಳಿಸಲು ಪ್ರಯತ್ನಿಸುತ್ತೇನೆ.

ಗಜಪತಿರಾಯರು ಮೈಸೂರಿನಲ್ಲಿ ಕರಕುಶಲವಸ್ತುಗಳ ಮಳಿಗೆಯನ್ನು ಹೊಂದಿದ್ದಾರೆ. ಅವರ ಮಳಿಗೆಗೆ ಭೇಟಿಕೊಟ್ಟ ವಿದೇಶೀಯ

ರೊಬ್ಬರು ಅಲ್ಲಿದ್ದ ಕರೀ ಮರದ ಆನೆಗೆ ಮಾರುಹೋಗಿ ಅದನ್ನು ಖರೀದಿಸಬಯಸಿದರು. ಆದರೆ ಅವರು ಭಾರತ ದರ್ಶನ ಮಾಡಿ ಹಿಂತಿರುಗುವಾಗ ಅಮೇರಿಕೆಯ ಡಾಲರ್ ಖರೀದಿಸುವುದಾಗಿ ಹೇಳುತ್ತಾರೆ. ಅವರ ಪ್ರವಾಸ ಕಾರ್ಯಕ್ರಮದಂತೆ ಇಂದಿಗೆ ಮೂರು ತಿಂಗಳಿಗೆ ಅವರು ಇಲ್ಲಿಂದ ಹೊರಡಲಿದ್ದಾರೆ. ಗಜಪತಿರಾಯರು ಆನೆಯನ್ನು ಸ್ಥಳೀಯ ಕುಶಲಕರ್ಮಿಯಿಂದ 2,700 ರೂ.ಗಳಿಗೆ ಖರೀದಿಸಿದ್ದರು. ಅವರಿಗೆ ಅದರೊಡನೆ 300 ರೂ ಗಳ ಲಾಭ ಬೇಕು. ಇಂದಿನ ಅಮೇರಿಕಾ ಡಾಲರ್ ರೂಪಾಯಿ ವಿನಿಮಯ ದರ ರೂ. 30 ಇದ್ದರೆ ಗಜಪತಿರಾಯರು 100 ಅಮೇರಿಕಾ ಡಾಲರ್‌ಗೆ ಆನೆಯನ್ನು ಮಾರಿದರೆ 3 ತಿಂಗಳನಂತರ ವಿನಿಮಯದರ 31ಕ್ಕೆ ಏರಿದರೆ ಗಜಪತಿರಾಯರಿಗೆ ರೂ. 300ರ ಬದಲು ರೂ.400 ಲಾಭ ದೊರಕೀತು. ವಿನಿಮಯದರ29ಕ್ಕೆ ಇಳಿದರೆಗಜಪತಿರಾಯರಿಗೆ ರೂ. 300ರ ಬದಲು ರೂ.200 ಮಾತ್ರಲಾಭ ದೊರಕುತ್ತದೆ. ಈ ಅನಿಶ್ಚಯತೆಯಿಂದ ಪಾರಾಗಲು ಗಜಪತಿರಾಯರು ತಮ್ಮ ಬ್ಯಾಂಕರನೊಂದಿಗೆ ಮೂರುತಿಂಗಳ ನಂತರ ವಾಯಿದಾ ಕರಾರು ಮಾಡಿಕೊಂಡು, ಕರಾರಿನಂತೆ ವಿನಿಮಯದರ ರೂ. 30.30 ಇದ್ದರೆ 99 ಡಾಲರಿಗೂ 29.70 ಇದ್ದರೆ 101 ಡಾಲರಿಗೂ ಆನೆಯನ್ನು ಮಾರಲು ಒಪ್ಪಂದ ಮಾಡಿಕೊಂಡು ತಮಗೆ ರೂ. 3,000 ದೊರಕುವುದನ್ನು ಖಚಿತಗೊಳಿಸಿಕೊಳ್ಳಬಹುದು. ಆನೆಯನ್ನು ಒಂದು ವಿಶಿಷ್ಟವಾದ ಗಾಜಿನ ಪೆಟ್ಟಿಗೆಯಲ್ಲಿಟ್ಟು ಕಳುಹಿಸುವಂತೆ ಪ್ರವಾಸಿ ಕೇಳಿದ ಎಂದುಕೊಳ್ಳಿ. ಆ ಪೆಟ್ಟಿಗೆ ಲಂಡನ್ನಿನಲ್ಲಿ ಮಾತ್ರ ದೊರಕುತ್ತದೆ ಹಾಗೂ ಅದರ ಬೆಲೆ ಹತ್ತು ಬ್ರಿಟಿಷ್ ಪೌಂಡ್ ಎಂದುಕೊಳ್ಳೋಣ. ಹಾಗೂ ಪೆಟ್ಟಿಗೆ ಆದೇಶ ನೀಡಿದಂದಿನಿಂದ ಒಂದು ತಿಂಗಳ ನಂತರ ದೊರಕುತ್ತದೆ. ಇಂದಿನ ವಿನಿಮಯದರ ಬ್ರಿಟಿಷ್ ಪೌಂಡ್‌ಗೆ ರೂ 50 ಎಂದಿಟ್ಟುಕೊಳ್ಳೋಣ. ಗಜಪತಿರಾಯರು ತಮಗೆ 300ರೂ ದೊರಕುವುದನ್ನು ಖಚಿತಗೊಳಿಸಿಕೊಳ್ಳಬೇಕಾದರೆ ತಮ್ಮ ಬ್ಯಾಂಕರನೊಂದಿಗೆ ಒಂದು ತಿಂಗಳನಂತರ 10 ಪೌಂಡ್ ಖರೀದಿಸಲು ವಾಯಿದಾ ಒಪ್ಪಂದ ಮಾಡಿಕೊಳ್ಳುತ್ತಾರೆ. ಒಂದು ತಿಂಗಳ ವಾಯಿದಾದರ ಪೌಂಡಿಗೆ ರೂ 51 ಇದ್ದರೆ ಅವರಿಗೆ ಗಾಜಿನ ಪೆಟ್ಟಿಗೆ 510 ರೂಗಳಿಗೆ ದೊರಕುತ್ತದೆ. ಪೆಟ್ಟಿಗೆ ಸಹಿತ ಆನೆಯ ಬೆಲೆ 3510 ರೂಗಳು ಅವರಿಗೆ ದೊರಕಬೇಕು. ಹಾಗಾಗಿ ಗಜಪತಿರಾಯರು 3 ತಿಂಗಳ ಅಮೇರಿಕಾ ಡಾಲರ್ ವಾಯಿದಾದರ 29 ಇದ್ದರೆ 121.03 ಡಾಲರ್ ಬೆಲೆ ಹೇಳುತ್ತಾರೆ, ರೂ 31 ಇದ್ದರೆ 113.22 ಡಾಲರ್‌ಗಳ ಬೆಲೆ ಹೇಳಿ ತಮಗೆ 300 ರೂ ಲಾಭ ದೊರಕುವುದನ್ನು ಖಚಿತಗೊಳಿಸಿಕೊಳ್ಳುತ್ತಾರೆ.

ಒಂದು ತಿಂಗಳನಂತರ ಗಾಜಿನ ಪೆಟ್ಟಿಗೆ ಬಂದಾಗ ಬ್ರಿಟಿಷ್ ಪೌಂಡ್‌ನ ವಿನಿಮಯದರ ರೂ 49 ಎಂದಿಟ್ಟುಕೊಳ್ಳೋಣ. ಗಜಪತಿರಾಯರು ವಾಯಿದಾ ಒಪ್ಪಂದ ಮಾಡಿಕೊಳ್ಳದಿದ್ದರೆ ರೂ 490ಕ್ಕೆ ಅವರಿಗೆ ಗಾಜಿನ ಪೆಟ್ಟಿಗೆ ದೊರಕುತ್ತಿತ್ತು. ಆನೆಯನ್ನು ಗಾಜಿನ ಪೆಟ್ಟಿಗೆಯಲ್ಲಿಟ್ಟು ಕಳುಹಿಸಿದ ನಂತರ ರಾಯರಿಗೆ 121.03 ಅಮೇರಿಕಾ ಡಾಲರ್ ದೊರಕಿ, ಅದನ್ನು ಬ್ಯಾಂಕಿಗೆ ನೀಡಿದಾಗ ಅವರಿಗೆ 3510ರೂ ದೊರಕುತ್ತಿತ್ತು. ಆದರೆ ಅಂದಿನ ವಿನಿಮಯದರ ರೂ 31 ಇದ್ದರೆ ಗಜಪತಿರಾಯರಿಗೆ 261.93 ರೂಗಳ ಹೆಚ್ಚಿನ ಲಾಭ ದೊರಕುತ್ತಿತ್ತು.

| | | |
|---|---|---|
| ವ್ಯಯ | ಆನೆಯ ಬೆಲೆ | ರೂ 2700 |
| | ಗಾಜಿನ ಪೆಟ್ಟಿಗೆ 10 ಪೌಂಡ್ ರೂ. 49ರಂತೆ | 490 |
| | | 3190 |
| ಆದಾಯ | 121.03 ಅಮೇರಿಕಾ ಡಾಲರ್ ರೂ 31ರಂತೆ | 3751.93 |
| | ಲಾಭ | 561.93 |

**ವಾಯಿದಾ ಕರಾರು**

ವಾಯಿದಾ ಕರಾರು ಮಾಡಿಕೊಳ್ಳದೆ ರೂಪಾಯಿ ಪೌಂಡ್‌ನ ವಿನಿಮಯದರ ಹೆಚ್ಚಿ ರೂಪಾಯಿ ಅಮೇರಿಕಾ ಡಾಲರ್‌ನ ಬೆಲೆ ಕುಸಿದಿದ್ದರೆ ಗಜಪತಿರಾಯರಿಗೆ ಹೆಚ್ಚಿನ ನಷ್ಟವಾಗುತ್ತಿದ್ದುದೂ ನಿಜ. ಇದಕ್ಕೆ ಈಗ ಪರಿಹಾರ ದೊರಕಿದೆ. ಗಜಪತಿರಾಯರು ಇನ್ನು ಮುಂದೆ ವಾಯಿದಾ ಕರಾರಿನ ಬದಲು 'ಕರೆನ್ಸಿ ಬದಲಿ ಆಯ್ಕೆ ಒಪ್ಪಂದ ಮಾಡಿಕೊಳ್ಳಬೇಕು. ಒಂದು ತಿಂಗಳ ನಂತರ ಬ್ಯಾಂಕ್ ಗಜಪತಿರಾಯರಿಗೆ 10 ಪೌಂಡ್‌ಗಳನ್ನು ರೂ 51ರ ದರದಲ್ಲಿ ಮಾರಲು ಬದ್ಧವಾಗಿರುತ್ತದೆ. ಆದರೆ ಅಂದು ಮಾರುಕಟ್ಟೆಯಲ್ಲಿ ಅದಕ್ಕಿಂತ ಕಡಿಮೆ ಬೆಲೆಗೆ ಪೌಂಡ್ ದೊರಕಿದರೆ ಅವರು ಅದನ್ನು ಕೊಳ್ಳಲು ಸ್ವತಂತ್ರರು. ಅಂತೆಯೇ ಆನೆ ಮಾರಿದ ನಂತರ ಬರುವ 121.03 ಅಮೇರಿಕಾ ಡಾಲರ್ ಮಾರಲು ಸಹ ಅವರು ಕರೆನ್ಸಿ ಬದಲಿ ಆಯ್ಕೆ ಒಪ್ಪಂದ ಮಾಡಿಕೊಳ್ಳಬಹುದು. ನಿಶ್ಚಿತ ದಿನಾಂಕದಂದು ಪೂರ್ವನಿರ್ಧಾರಿತ ಬೆಲೆಗೆ ಡಾಲರ್ ಕೊಳ್ಳಲು ಬ್ಯಾಂಕ್ ಬದ್ಧವಾಗಿದ್ದರೂ ಡಾಲರ್ ಮಾರಲು ಗಜಪತಿರಾಯರು ಬದ್ಧರೇನಲ್ಲ. ಅಂದು ಮಾರುಕಟ್ಟೆಯ ವಿನಿಮಯದರ ಹೆಚ್ಚಿದ್ದರೆ ಅವರು ತಮಗೆ ದೊರಕಿದ ಡಾಲರ್‌ಗಳನ್ನು ಅಲ್ಲಿ ಮಾರಲು ಸ್ವತಂತ್ರರು. ಆದರೆ ಈ ಸೌಲಭ್ಯ ಉಚಿತವಾಗಿ ದೊರಕದು. ಇದಕ್ಕಾಗಿ ಶುಲ್ಕ ತೆರಬೇಕು. ಈ ಸೌಲಭ್ಯ ನೀಡುವ ಬ್ಯಾಂಕ್ ಮತ್ತೊಂದು ಕರೆನ್ಸಿ ಬದಲಿ ಆಯ್ಕೆ ಒಪ್ಪಂದ ಮಾಡಿಕೊಂಡು ಅದಕ್ಕೆ ತಗಲುವ ವೆಚ್ಚ ಹಾಗೂ ಲಾಭವನ್ನು ಗ್ರಾಹಕರಿಂದ ವಸೂಲು ಮಾಡುತ್ತದೆ. ಒಂದೇ ವಾಕ್ಯದಲ್ಲಿ ಹೇಳುವುದಾದರೆ ಕರೆನ್ಸಿಬದಲಿ ಆಯ್ಕೆ ಸೌಲಭ್ಯ ಪಡೆಯುವುದರ ಮೂಲಕ ವಿದೇಶಿ ವ್ಯವಹಾರ ನಡೆಸುವವರು ವಿನಿಮಯದರದ ಏರಿಳಿತದಿಂದ ಉಂಟಾಗುವ ನಷ್ಟಸಂಭಾವ್ಯತೆಯನ್ನು ನಿವಾರಿಸಿಗೊಳ್ಳುವುದರ ಜೊತೆಗೆ ಅದರಿಂದ ದೊರಕಬಹುದಾದ ಲಾಭವನ್ನು ತಮ್ಮದಾಗಿಸಿಕೊಳ್ಳುವ ಅವಕಾಶ ಹೊಂದಿರುತ್ತಾರೆ.

**ಎರಡು ಬಗೆಯ ಆಯ್ಕೆ**

ಕರೆನ್ಸಿ ಬದಲಿ ಆಯ್ಕೆ ಮುಖ್ಯವಾಗಿ ಎರಡು ಬಗೆಯದು. ಮೊದಲನೆಯದು ಅಮೇರಿಕನ್ ಆಯ್ಕೆ : ಈ ಆಯ್ಕೆಯಲ್ಲಿ ಆಯ್ಕೆದಾರ ಆಯ್ಕೆಯ ಅವಧಿಯವರೆಗೆ ಯಾವಾಗ ಬೇಕಾದರೂ ತಮ್ಮ ವಹಿವಾಟು ನಡೆಸಲು ಸ್ವಾತಂತ್ರ್ಯ ಹೊಂದಿರುತ್ತಾನೆ. ಯುರೋಪಿಯನ್ ಆಯ್ಕೆ: ಈ ತೆರನ ಆಯ್ಕೆಯಲ್ಲಿ ಆಯ್ಕೆದಾರ ನಿರ್ದಿಷ್ಟ ದಿನದಂದು, ಅಂದರೆ ಆಯ್ಕೆಯು ಪಕ್ವದಿನದಂದು, ಮಾತ್ರ ವಹಿವಾಟು ನಡೆಸಲು ಹಕ್ಕು ಪಡೆದಿರುತ್ತಾರೆ.

* * *

'ಕರೆನ್ಸಿ ಬದಲಿ ಆಯ್ಕೆ'ಗೆ ಸಂಬಂಧಿಸಿದ ಕೆಲವು ಪಾರಿಭಾಷಿಕ ಪದಗಳು :

**ಖರೀದಿ ಆಯ್ಕೆ (call option) :** ಸಾಮಾನ್ಯವಾಗಿ ಅಮೇರಿಕನ್ ಡಾಲರ್ ನೀಡಿ ಪೂರ್ವನಿಶ್ಚಿತ ದರದಲ್ಲಿ ಪೂರ್ವನಿಶ್ಚಿತ ಮೊತ್ತದಷ್ಟು ನಿರ್ದಿಷ್ಟ ಕರೆನ್ಸಿ ಕೊಳ್ಳುವ ಹಕ್ಕು. ಆದರೆ ಕೊಳ್ಳಲೇ ಬೇಕೆಂಬ ಕಡ್ಡಾಯ ಇಲ್ಲ.

**ನೀಡಿಕೆ ಆಯ್ಕೆ (put option) :** ಪೂರ್ವನಿಶ್ಚಿತ ದರದಲ್ಲಿ ನಿರ್ದಿಷ್ಟ ಮೊತ್ತದ ನಿರ್ದಿಷ್ಟ ಕರೆನ್ಸಿ ನೀಡಿ ಸಾಮಾನ್ಯವಾಗಿ ಅಮೇರಿಕಾ ಡಾಲರ್ ಪಡೆಯುವ ಹಕ್ಕು. ಆದರೆ ಪಡೆಯಲೇ ಬೇಕೆಂಬ ಕಡ್ಡಾಯ ಇಲ್ಲ.

**ಆಯ್ಕೆ ದರ (strike price) :** ಆಯ್ಕೆದಾರ ಖರೀದಿಸಲು/ಮಾರಲು ನಿರ್ಧರಿಸಿದ ವಿನಿಮಯದರ.

**ಸಮಮೌಲ್ಯ (at the money) :** ಆಯ್ಕೆದರ ಹಾಗೂ ಅಂದಿನ ವಿನಿಮಯದರ ಒಂದೇ ಆದರೆ ಅದು ಸಮ ಮೌಲ್ಯ ಎನ್ನಲಾಗುತ್ತದೆ.

**ತೇಮಾನ ಮೌಲ್ಯ (in the money):** ಆಯ್ಕೆದರ ಅಂದಿನ ವಿನಿಮಯದರಕ್ಕಿಂತ ಲಾಭದಾಯಕವಾಗಿದ್ದರೆ ತೇಮಾನ ಮೌಲ್ಯ ಎನ್ನಲಾಗುತ್ತದೆ.

**ಅಧಿಕ ಮೌಲ್ಯ (out of money) :** ಆಯ್ಕೆದರ ಅಂದಿನ ವಿನಿಮಯದರಕ್ಕಿಂತ ನಷ್ಟದಾಯಕವಿದ್ದರೆ ಅದು ಅಧಿಕ ಮೌಲ್ಯ ಎನ್ನಲಾಗುತ್ತದೆ.

**ಪಕ್ವದಿನಾಂಕ (expiry Date) :** ಆಯ್ಕೆದಾರ ತನ್ನ ಹಕ್ಕನ್ನು ಚಲಾಯಿಸುವ ದಿನಾಂಕ

**ಆಯ್ಕೆ ಚಲಾವಣೆ (excercise) :** ಆಯ್ಕೆದಾರ ತನ್ನ ಹಕ್ಕನ್ನು ಚಲಾಯಿಸುವ ಕ್ರಿಯೆ.

**ಆಯ್ಕೆ ಶುಲ್ಕ (premium) :** ಕರೆನ್ಸಿಬದಲಿ ಸೌಲಭ್ಯಕ್ಕೆ ನೀಡುವ ಶುಲ್ಕ.

**ಉಳಿಕೆ ಅವಧಿ ಮೌಲ್ಯ (time value) :** ಯಾವುದೇ ಕರೆನ್ಸಿ ಬದಲಿ ಆಯ್ಕೆಯನ್ನು ಅವಧಿಪೂರ್ವ ರದ್ದುಗೊಳಿಸುವುದರಿಂದ ದೊರಕಬಹುದಾದ ರುಸುಮು. ●

# ಬ್ಯಾಂಕುಗಳ ವಿನಿಯೋಜನೆ: ಹೊಸ ದೃಷ್ಟಿಕೋನದ ಅಗತ್ಯ

[11ನೇ ಪುಟದಿಂದ ಮುಂದುವರಿದಿದೆ]

ಕಟ್ಟೆ ವಿನಿಯೋಜನೆಯಲ್ಲಿ ಒಲವು ತೋರುತ್ತಿಲ್ಲ. ಆದರೆ ಸದೃಢ ವಿನಿಯೋಜನ ತಂತ್ರದ ದೃಷ್ಟಿಯಿಂದ ಈ ಧೋರಣೆ ಅಪೇಕ್ಷಣೀಯವಲ್ಲ. ಇತ್ತೀಚೆಗೆ ಹೆಚ್ಚುವರಿ ಠೇವಣಿ ಮೊತ್ತವನ್ನು ಷೇರು ಮತ್ತು ಬಾಂಡುಗಳಲ್ಲಿ ವಿನಿಯೋಜಿಸಲು ಅನುಮತಿ ನೀಡಿರುವುದು ಬ್ಯಾಂಕುಗಳು ಹೊಸ ವಿನಿಯೋಜನ ಮಾರ್ಗಗಳನ್ನು ಅನ್ವೇಷಿಸಲು ಸಹಕಾರಿಯಾಗಬೇಕು.

ಇಂದು ಲಾಭಪ್ರದತೆಯ ಮಾತು ಮತ್ತೆ ಬ್ಯಾಂಕುಗಳಲ್ಲಿ ಪ್ರಧಾನವಾಗಿ ಕೇಳಿಬರುತ್ತಿದ್ದು, ಸಾಲ ನೀಡಿಕೆಯಿಂದ ಲಾಭಪ್ರದತೆ ಸಾಧ್ಯವಿಲ್ಲ ಎಂಬುದಂತೂ ಸಾಬೀತಾದ ವಿಷಯವಾಗಿದೆ. ಆದ್ದರಿಂದ ಬ್ಯಾಂಕುಗಳು ತಮ್ಮ ವಿನಿಯೋಜನಕ್ರಮವನ್ನು ವಿಸ್ತರಿಸುವುದೂ ಪುನಶ್ಚೇತನಗೊಳಿಸುವುದೂ ಅನಿವಾರ್ಯವಾಗಿದೆ. ಬ್ಯಾಂಕುಗಳು ತಮ್ಮ ಆದ್ಯತೆಗಳನ್ನು ಪುನರ್ರೂಪಿಸಿ ನಷ್ಟಭಯವಿಲ್ಲದ, ಹೆಚ್ಚು ವರಮಾನ ತರುವ ವಿನಿಯೋಜನ ವಿನ್ಯಾಸ ರೂಪಿಸುವವರೆಗೆ ಉತ್ತಮ ಲಾಭ ಎನ್ನುವುದು ಕೇವಲ ಕನಸಿನ ಮಾತಾದೀತು. ●

## ವಿಳಾಸ ಬದಲಾವಣೆ

'ಬ್ಯಾಂಕಿಂಗ್ ಪ್ರಪಂಚ'ದ ಆಜೀವ ಚಂದಾದಾರರು ತಮ್ಮ ವಿಳಾಸದಲ್ಲಿ ಆಗುವ ಯಾವುದೇ ಬದಲಾವಣೆಯನ್ನು ಕೂಡಲೇ ದಯವಿಟ್ಟು ತಿಳಿಸಬೇಕು.

ಪ್ರಧಾನ ಕಾರ್ಯದರ್ಶಿ
**ಸಮನ್ವಯ ಸಮಿತಿ**
ಭಾರತೀಯ ಸ್ಟೇಟ್ ಬ್ಯಾಂಕ್, ಕನ್ನಡ ಸಂಘಗಳು
ಭಾರತೀಯ ಸ್ಟೇಟ್ ಬ್ಯಾಂಕ್
(ಬೆಂಗಳೂರು ನಗರ ಶಾಖೆ)
೨೨ ಜಯಚಾಮರಾಜೇಂದ್ರ ರಸ್ತೆ
ಬೆಂಗಳೂರು ೫೬೦ ೦೦೨

# ಹಡಗಿನಲ್ಲಿ ಸರಕು ರವಾನೆಗೆ ಮುಂಚೆ ವಿದೇಶಿ ಚಲಾರ್ಥ ಉದರಿ

ಬಿ. ಜಿ. ರಂಗನಾಥ್
ಭಾರತೀಯ ಸ್ಟೇಟ್ ಬ್ಯಾಂಕ್, ಮೈಸೂರು ಶಾಖೆ

**ಭಾರತದಲ್ಲಿರುವುದಕ್ಕಿಂತ ವಿದೇಶಗಳಲ್ಲಿ ಬಡ್ಡಿದರ ಕಡಿಮೆ ಇರುವುದರಿಂದ ತಾವು ಪ್ರತಿಕೂಲ ಸ್ಪರ್ಧೆಯನ್ನೆದುರಿಸಬೇಕಾಗುತ್ತದೆಂದು ಭಾರತೀಯ ರಫ್ತುದಾರರು ದೀರ್ಘಕಾಲದಿಂದ ಕೊರಗುತ್ತ ಬಂದಿದ್ದಾರೆ. ಭಾರತೀಯ ರಿಸರ್ವ್ ಬ್ಯಾಂಕ್ ಘೋಷಿಸಿರುವ ಹೊಸ ಉದರಿ ಯೋಜನೆಯಿಂದ ಈ ಕೊರತೆಯ ನಿವಾರಣೆಯಾಗುತ್ತದೆ. ಹೇಗೆ ಎಂಬುದನ್ನು ಈ ಲೇಖನ ವಿವರಿಸುತ್ತದೆ.**

**ಹಿನ್ನೆಲೆ :** ಹಡಗಿನಲ್ಲಿ ಸರಕಿನ ರವಾನೆಗೆ ಮುಂಚೆ ರಫ್ತುದಾರರಿಗೆ ಉದರಿ ಸೌಲಭ್ಯ ದೊರಕುತ್ತಿತ್ತು. ರಫ್ತು–ಆಮದು ಬ್ಯಾಂಕಿನಿಂದ (EXIM Bank) ವಿದೇಶಿ ಕರೆನ್ಸಿಯಲ್ಲಿ ಈ ಸೌಲಭ್ಯ ಲಭ್ಯವಿತ್ತು. ಆದರೆ ಭಾರತೀಯ ರಿಸರ್ವ್ ಬ್ಯಾಂಕಿನ ಆದೇಶಗಳ ಪ್ರಕಾರ ನವೆಂಬರ್ 93ರಿಂದ ವಾಣಿಜ್ಯ ಬ್ಯಾಂಕುಗಳು ಅಥವಾ ಅಧಿಕೃತ ವ್ಯವಹಾರಿಗಳು ರಫ್ತುದಾರರಿಗೆ ರಫ್ತು–ಆಮದು ಬ್ಯಾಂಕು ಕೊಡುವ ಸೌಲಭ್ಯದ ಜೊತೆಗೆ ತಾವೂ ವಿದೇಶಿ ಕರೆನ್ಸಿಯಲ್ಲಿ ರವಾನೆ ಪೂರ್ವ ಉದರಿ ಸೌಲಭ್ಯ ನೀಡಬಹುದಾಗಿದೆ.

**ಜಾರಿಯಲ್ಲಿರುವ ರವಾನೆ ಪೂರ್ವ ಉದರಿ ಯೋಜನೆ**

ರಫ್ತುದಾರರಿಗೆ ರವಾನೆಗೆ ಮುಂಚಿನ ಉದರಿ ರೂಪಾಯಿಯ ಮೌಲ್ಯದಲ್ಲಿ ರಿಯಾಯಿತಿ ಬಡ್ಡಿದರದಲ್ಲಿ ದೊರೆಯುತ್ತದೆ. ಈ ದರ ಶೇ. 13. ಇದರ ಅವಧಿ 180 ದಿನಗಳು. ಈ ಸೌಲಭ್ಯ ಉದರಿ ಪತ್ರ ಅಥವಾ ಸ್ಥಿರ ಆದೇಶ ಇದ್ದರೆ ಮಾತ್ರ ಲಭ್ಯವಾಗುತ್ತದೆ. ಆದರೆ ರಫ್ತುದಾರರ ಹಿನ್ನೆಲೆ ಚೆನ್ನಾಗಿದ್ದು ವ್ಯವಹಾರ ಉತ್ತಮವಾಗಿದ್ದರೆ ಉದರಿ ಪತ್ರ (ಲೆಟರ್ ಆಫ್ ಕ್ರೆಡಿಟ್) ಇಲ್ಲದೆಯೇ ಹಡಗಿನಲ್ಲಿ ರವಾನೆಗೆ ಮುಂಚೆಯೇ ಉದರಿಯನ್ನು ನೀಡಬಹುದು. ಇದಲ್ಲದೆ ರಫ್ತುದಾರರಿಗೆ 'ಚಾಲ್ತಿ ಖಾತೆ' (ರನಿಂಗ್ ಅಕೌಂಟ್) ಸೌಲಭ್ಯವನ್ನು ಸಹ ನೀಡಲಾಗುತ್ತದೆ. ಚಾಲ್ತಿ ಖಾತೆಯಲ್ಲಿ ನಿರ್ದಿಷ್ಟವಾದ ಒಪ್ಪಂದ ಇದ್ದರೂ ರಫ್ತಿನಿಂದ ಬಂದ ಹುಟ್ಟುವಳಿ ಖಾತೆಗೆ ಜಮಾ ಆಗುವುದರ ಮೂಲಕ ಮೊದಲ ಸಾಲದ ಕಂತನ್ನು ತೀರಿಸುತ್ತದೆ. ಅಂತರರಾಷ್ಟ್ರೀಯ ಮಟ್ಟಕ್ಕೆ ಹೋಲಿಸಿದರೆ ರೂಪಾಯಿ ಉದರಿಯಲ್ಲಿ ಬಡ್ಡಿದರ ಹೆಚ್ಚಾಗಿರುವುದರಿಂದ ರಫ್ತುದಾರರು ರವಾನೆ ಪೂರ್ವ ವಿದೇಶಿ ಚಲಾರ್ಥ ಉದರಿ ಯೋಜನೆಗೆ ಹಾತೊರೆಯುತ್ತಿದ್ದರು. ಅಲ್ಲದೆ ರಫ್ತು–ಆಮದು ಬ್ಯಾಂಕಿನವರು ರಫ್ತುದಾರರಿಗೆ ಆಮದು ಮಾಡಿಕೊಳ್ಳುವ ಉಪಕರಣಗಳಿಗೆ ಮಾತ್ರ ವಿದೇಶಿ ಕರೆನ್ಸಿಯಲ್ಲಿ ಹಡಗು ರವಾನೆ ಸೌಲಭ್ಯವನ್ನು ನೀಡುತ್ತಿದ್ದರು.

**ರವಾನೆ ಪೂರ್ವ ವಿದೇಶಿ ಚಲಾರ್ಥ ಉದರಿ ಯೋಜನೆ**

ಈ ಯೋಜನೆ ರಫ್ತು ಮಾಡುವುದಕ್ಕಾಗಿ ಆಮದು ಮಾಡಿಕೊಂಡ ಪದಾರ್ಥಗಳಿಗೆ ಹಾಗೂ ರಫ್ತುಮಾಡುವುದಕ್ಕಾಗಿ ದೇಶದಲ್ಲಿ ತಯಾರಾದ ಪದಾರ್ಥಗಳಿಗೆ ಅನ್ವಯಿಸುತ್ತದೆ. ಈ ಸೌಲಭ್ಯ ಪರಿವರ್ತನೆಗೊಳ್ಳುವ ಯಾವುದಾದರೊಂದು ವಿದೇಶಿ ಕರೆನ್ಸಿಯಲ್ಲಿ ದೊರೆಯುತ್ತದೆ. ಈ ಯೋಜನೆ ಸ್ವಯಂ ಸಮಾಪನಕ್ಕೆ (ಸೆಲ್ಫ್ ಲಿಕ್ವಿಡೇಟಿಂಗ್) ಒಳಪಡುವಂಥದ್ದು. ಇದರ ಪ್ರಕಾರ ಸರಕುಗಳು ಹಡಗಿನಲ್ಲಿ ರವಾನೆ ಆದ ಅನಂತರ ರಫ್ತು ಹುಂಡಿಗಳನ್ನು ವಟಾಯಿಸಬಹುದು ಅಥವಾ ಮರು ವಟಾಯಿಸಬಹುದು.

**ಎರಡು ಬಗೆಯ ಅವಕಾಶ**

ರಫ್ತು ಹಣಕಾಸಿನ ಸೌಲಭ್ಯ ಪಡೆಯಲು ರಫ್ತುದಾರರಿಗೆ ಎರಡು ರೀತಿಯ ಅವಕಾಶಗಳಿವೆ: ಸರಕು ರವಾನೆಗೆ ಮುಂಚಿನ ಉದರಿಯನ್ನು ರೂಪಾಯಿಯಲ್ಲಿ ಪಡೆದು ರವಾನೆಯ ಅನಂತರ ಉದರಿಯನ್ನು ರೂಪಾಯಿ ಅಥವಾ ವಿದೇಶಿ ಚಲಾರ್ಥದಲ್ಲಿ ಪಡೆಯಬಹುದು ಅಥವಾ ರಫ್ತು ಹುಂಡಿಯನ್ನು ವಟಾವಣೆ ಇಲ್ಲವೇ ಮರು ವಟಾವಣೆ ಮಾಡುವುದು. ರವಾನೆಗೆ ಮುಂಚಿನ ಉದರಿಯನ್ನು ವಿದೇಶಿ ಚಲಾರ್ಥದಲ್ಲಿ ಪಡೆದು ಅನಂತರ ರಫ್ತು ಹುಂಡಿಗಳನ್ನು ವಿದೇಶಿ ಕರೆನ್ಸಿಯಲ್ಲಿ ವಟಾಯಿಸುವುದು.

**ಅರ್ಹತೆಯ ಪ್ರಮಾಣ**

ಯಾವ ರಫ್ತುದಾರನಿಗೆ ಸ್ಥಿರವಾದ ಉದರಿ ಪತ್ರ ಲಭ್ಯವಿರುವುದೋ ಅಂಥವನಿಗೆ ಈ ಸೌಲಭ್ಯ ದೊರಕುತ್ತದೆ. ಈ ಯೋಜನೆ

ಯಲ್ಲಿ 'ಚಾಲ್ತಿಖಾತೆ' ಸೌಲಭ್ಯ ಇರುವುದಿಲ್ಲ. ಆದರೆ ಪ್ಯಾಕಿಂಗ್ ಉದರಿ ವಚ್ಚದ ತೀರುವಿಕೆಯಲ್ಲಿ 'ಮೊದಲು ಬಂದದ್ದು ಒಳಗೆ ಮೊದಲುಹೊರಗೆ' ಸೂತ್ರಕ್ಕೆಅವಕಾಶವಿರುತ್ತದೆ. ಈ ರವಾನೆಪೂರ್ವ ವಿದೇಶಿ ಚಲಾರ್ಥವನ್ನು ರಫ್ತು ಉದ್ದೇಶಕ್ಕೆ ಬಳಸುವ ಸ್ವದೇಶಿ ವಸ್ತುಗಳ ಹಣಕಾಸು ಪೂರೈಕೆಗೆ ಪೂರ್ತಿ ಅಥವಾ ಭಾಗಶಃ ಉಪಯೋಗಿಸಬಹುದು. ಅಂಥ ಸಂದರ್ಭಗಳಲ್ಲಿ ರಫ್ತುದಾರರಿಗೆ ವಿದೇಶಿ ಚಲಾರ್ಥಕ್ಕೆ ಹೋಲುವಂಥ ರೂಪಾಯಿ ಮೌಲ್ಯವನ್ನು ವಹಿವಾಟಿನ ತತ್‌ಕ್ಷಣದ ದರದಲ್ಲಿ (ಸ್ಪಾಟ್ ರೇಟ್) ನೀಡಲಾಗುತ್ತದೆ. ಒಂದು ವೇಳೆ ರವಾನೆ ಪೂರ್ವ ವಿದೇಶಿ ಚಲಾರ್ಥ ಉದರಿ ತೆಗೆದುಕೊಂಡ ಅನಂತರ ವಿದೇಶಿ ಆದೇಶ ರದ್ದಾದರೆ, ವಿದೇಶಿ ವಿನಿಮಯವನ್ನು ತಂತಿ ವರ್ಗಾವಣೆ ಮಾರಾಟ ದರದಲ್ಲಿ ಮಾರಿ ಸಾಲ ತೀರಿಸಬಹುದು. ರವಾನೆ ಪೂರ್ವ ವಿದೇಶಿ ಚಲಾರ್ಥ ಉದರಿಯಲ್ಲಿ ಹಣ ಬಾಕಿ ಉಳಿದಿದ್ದರೆ ಅದನ್ನು ರೂಪಾಯಿಗೆ ಪರಿವರ್ತಿಸಿ ಅದರ ಮೇಲೆ ರಫ್ತು ಉದರಿಯ ಮೇಲೆ ವಿಧಿಸುವ ಬಡ್ಡಿಗಿಂತ ಶೇ. 2ರಷ್ಟು ಹೆಚ್ಚು ಬಡ್ಡಿದರವನ್ನು ನೀಡಬೇಕಾಗುತ್ತದೆ. ಇಂಥ ರಫ್ತುದಾರರಿಗೆ ಮತ್ತೆ ರವಾನೆ ಪೂರ್ವ ವಿದೇಶಿ ಚಲಾರ್ಥ ಉದರಿ ಸೌಲಭ್ಯ ಸಿಗಬೇಕಾದರೆ ಅವರು ಅಧಿಕೃತ ವ್ಯವಹಾರಿಗಳಿಗೆ ನಿಜವಾದ ಕಾರಣವನ್ನು ತಿಳಿಸಿ. ಊಹಾಪೋಹಗಳಿಂದ ಹೊರತಾಗಿದ್ದೇವೆ ಎಂದು ಸಾಬೀತುಪಡಿಸಬೇಕು.

### ಬಡ್ಡಿದರ

ಇದರ ಮೇಲಿನ ಬಡ್ಡಿದರ ಅಂತರರಾಷ್ಟ್ರೀಯ ಆಧಾರದ ದರಕ್ಕೆ ಹೊಂದಿಕೊಂಡಿದೆ.

ಇದರ ಮೇಲಿನ ಬಡ್ಡಿದರ ಸಂಬಂಧಪಟ್ಟ ಕರೆನ್ಸಿಗೆ 6 ತಿಂಗಳ ಲಿಬಾರ್‌ಗಿಂತ (libor) (ಲಂಡನ್ ಅಂತರ ಬ್ಯಾಂಕ್ ಪ್ರಸ್ತಾವ ದರ) ಶೇ. 2ರಷ್ಟು ಹೆಚ್ಚಾಗಿರುತ್ತದೆ.

ಜನವರಿ 1994ರಲ್ಲಿ ಲಿಬಾರ್ ದರಗಳು ಈ ರೀತಿ ಇದ್ದುವು:

| | | |
|---|---|---|
| ಅಮೆರಿಕನ್ ಡಾಲರ್ | — | 3.5000 |
| ಪೌಂಡ್ | — | 5.1875 |
| ಡಾಯಿಷ್ ಮಾರ್ಕ್ | — | 5.7379 |
| ಜಪಾನ್ ಯೆನ್ | — | 1.9375 |

ಈ ಬಡ್ಡಿ ದರಗಳು ನೌಕಾ ಸಾಗಣೆಗೆ ವಿಧಿಸುವ ಶೇ. 13 ಬಡ್ಡಿಗಿಂತ ಕಡಿಮೆ. ವಿದೇಶಿ ಕರೆನ್ಸಿಯಲ್ಲಿ ಸರಕು ರವಾನೆಗೆ ಮುಂಚಿನ ಉದರಿ ಪಡೆಯುವುದರಿಂದ ಹೇಗೆ ಲಾಭದಾಯಕ ಎಂಬುದು ಈ ಮುಂದಿನ ಉದಾಹರಣೆಯಿಂದ ತಿಳಿದುಬರುತ್ತದೆ.

ಉದಾ: ಒಬ್ಬ ರಫ್ತುದಾರ 10,000 ಡಾಲರ್ ವಿದೇಶಿ ಕರೆನ್ಸಿ ಉದರಿ ಪಡೆದಿದ್ದಾನೆ ಎಂದುಕೊಳ್ಳೋಣ. ಬಡ್ಡಿದರ ಶೇ. 6.5. 90 ದಿವಸಗಳ ಅವಧಿಗೆ ಬಡ್ಡಿ ಈ ರೀತಿ ಆಗುತ್ತದೆ: (ವರ್ಷಕ್ಕೆ 360 ದಿನಗಳು ಎಂದು ಭಾವಿಸಲಾಗಿದೆ)

$$\frac{10,000 \times 6.5 \times 90}{36,000} = 162 \text{ ಡಾಲರ್}$$

1 ಡಾಲರ್‌ಗೆ ರೂ. 32/- ಅಂದುಕೊಂಡರೆ $162 \times 32 =$ ರೂ. 5184 ಆಗುತ್ತದೆ. ಆದರೆ ಉದರಿಯನ್ನು ರೂಪಾಯಿ ಮೌಲ್ಯದಲ್ಲಿ ತೆಗೆದುಕೊಂಡರೆ

$$\frac{3,20,000 \times 13 \times 90}{36,3000} = \text{ರೂ. } 10,400/- \text{ (13 ಈಗಿನ ಬಡ್ಡಿದರ)}$$

ಆದ್ದರಿಂದ ರಫ್ತುದಾರನಿಗೆ ವಿದೇಶಿ ಕರೆನ್ಸಿಯಲ್ಲಿ ಸರಕು ರವಾನೆ ಪೂರ್ವ ಉದರಿ ಪಡೆಯುವುದರಿಂದ ರೂ. 10,400 —5184 = ರೂ. 5276 ಲಾಭ ಆಗುತ್ತದೆ.

### ವಿನಿಮಯದ ನಷ್ಟಸಂಭವ

ಸರಕು ರವಾನೆ ಪೂರ್ವ ವಿದೇಶಿ ಚಲಾರ್ಥ ಉದರಿಯಿಂದ ಯಾವುದೇ ರೀತಿಯ ವಿನಿಮಯ ನಷ್ಟದ ಸಂಭವವಿಲ್ಲ. ಏಕೆಂದರೆ ರಫ್ತು ಹುಂಡಿಗಳನ್ನು ಪರಕ್ರಾಮಣಕ್ಕೆ (ನೆಗೋಷಿಯೇಷನ್) ಕೊಟ್ಟಿರಬಹುದು ಹಾಗೂ ಅವುಗಳ ಹುಟ್ಟುವಳಿಯಿಂದ ಸರಕು ರವಾನೆ ಪೂರ್ವ ವಿದೇಶಿ ಚಲಾರ್ಥ ಸಾಲವನ್ನು ಮುಕ್ತಗೊಳಿಸಬಹುದು. ಒಂದು ವೇಳೆ ಹುಂಡಿಗಳನ್ನು ವಸೂಲಿಗಾಗಿ ಕಳುಹಿಸಿದ್ದರೆ ಅವು ವಸೂಲಾಗಿ ಬಂದ ಮೇಲೆ ಹುಟ್ಟುವಳಿಯಿಂದ ಮೋಚನೆ ಸಾಧ್ಯ.

### ಉದರಿಯ ಅವಧಿ

ಪ್ರಾರಂಭದಲ್ಲಿ ರೂಪಾಯಿ ಉದರಿಯಂತೆ ಈ ಉದರಿ ಗರಿಷ್ಠ 180 ದಿನಗಳಿಗೆ ಮಾತ್ರ ಲಭ್ಯವಿರುತ್ತದೆ. ಇದರ ವಿಸ್ತರಣೆ ಸರಕು ರವಾನೆ ರೂಪಾಯಿ ಉದರಿಯ ಮಾದರಿಯನ್ನು ಅವಲಂಬಿಸಿರುತ್ತದೆ. ಜೊತೆಗೆ ಶೇ. 2 ಬಡ್ಡಿದರವನ್ನು ಹೆಚ್ಚಾಗಿ ತೆರಬೇಕಾಗಿರುತ್ತದೆ. ಆದರೆ 360 ದಿನಗಳ ವರೆಗೆ ರಫ್ತುದಾರ ಸರಕುಗಳನ್ನು ರಫ್ತು ಮಾಡದಿದ್ದ ಪಕ್ಷದಲ್ಲಿ ಸರಕು ರವಾನೆ ಪೂರ್ವ ವಿದೇಶಿ ಚಲಾರ್ಥ ಉದರಿ ಸೌಲಭ್ಯ ರೂಪಾಯಿ ಸೌಲಭ್ಯಕ್ಕೆ ಪರಿವರ್ತನೆಗೊಂಡು ಅವನು ಶೇ. 2 ದರದ ಬಡ್ಡಿಯನ್ನು ದಂಡವಾಗಿ ನೀಡಬೇಕಾಗುತ್ತದೆ. ●

# ವೈಯುಕ್ತಿಕ ಬ್ಯಾಂಕಿಂಗ್ ಗ್ರಾಹಕರಿಗೆ ಉದರಿ ಸೌಲಭ್ಯಗಳು

**ಎಂ. ಆರ್. ಶ್ರೀರಂಗರಾಜನ್**

ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ

**ಪ್ರತಿಯೊಬ್ಬ ಗ್ರಾಹಕನ ಆವಶ್ಯಕತೆಗೂ ಸ್ಪಂದಿಸುವ ಬ್ಯಾಂಕುಗಳು ಅವನಿಗೆ ನೆರವಾಗುವ ಉದ್ದೇಶದಿಂದಲೇ ವೈಯುಕ್ತಿಕ ಬ್ಯಾಂಕಿಂಗ್ ವಿಭಾಗದಲ್ಲಿ ನಾನಾ ಬಗೆಯ ಸಾಲ ಯೋಜನೆಗಳನ್ನು ಹುಟ್ಟುಹಾಕುತ್ತಿವೆ. ಈ ಲೇಖನವನ್ನೋದುವ ನೀವು ಬ್ಯಾಂಕರರಾಗಿರದಿದ್ದಲ್ಲಿ, ನಿಮ್ಮ ಆವಶ್ಯಕತೆಯನ್ನು ಪೂರೈಸುವ ಯಾವುದಾದರೂ ಯೋಜನೆ ಇಲ್ಲಿದೆಯೇ ನೋಡಿ. ಸೌಲಭ್ಯ ಪಡೆದುಕೊಳ್ಳಿ.**

ಬ್ಯಾಂಕುಗಳ ಉದ್ದೇಶ ಠೇವಣಿ ಸಂಗ್ರಹಣೆ ಮತ್ತು ಸಾಲ ನೀಡುವಿಕೆ. ಬ್ಯಾಂಕುಗಳು ಸಂಗ್ರಹಿಸಿದ ಠೇವಣಿಯನ್ನು ಗ್ರಾಹಕರಿಗೆ ಸಾಲದ ರೂಪದಲ್ಲಿ ನೀಡುತ್ತವೆ. ಬ್ಯಾಂಕುಗಳಲ್ಲಿ ಅನೇಕ ರೀತಿಯ ಸಾಲದ-ಯೋಜನೆಗಳಿವೆ. ಬ್ಯಾಂಕುಗಳು ಬಹು ದೊಡ್ಡ ಸಂಸ್ಥೆಗಳಿಗೆ ಮತ್ತು ಕೈಗಾರಿಕಾ ಸಂಸ್ಥೆಗಳಿಗೆ ಸಾಲ ನೀಡುತ್ತವೆ. ಜೊತೆಗೆ ಪ್ರತಿಯೊಬ್ಬ ಗ್ರಾಹಕನ ಆವಶ್ಯಕತೆಗೂ ಸ್ಪಂದಿಸುವುದು ಆವಶ್ಯಕ. ಹೀಗೆ ಗ್ರಾಹಕರ ವೈಯುಕ್ತಿಕ ಆವಶ್ಯಕತೆಗಳಿಗೆ ನೆರವು ನೀಡಲೆಂದೇ ವೈಯುಕ್ತಿಕ ಬ್ಯಾಂಕಿಂಗ್ ವಿಭಾಗದಲ್ಲಿ ಅನೇಕ ರೀತಿಯ ಉದರಿ ಸೌಲಭ್ಯಗಳಿವೆ. ರಾಷ್ಟ್ರೀಕರಣಕ್ಕೆ ಮುನ್ನ ಪರಿಸ್ಥಿತಿ ಸ್ವಲ್ಪ ವ್ಯತಿರಿಕ್ತವಾಗಿತ್ತು. ವೈಯುಕ್ತಿಕ ಸಾಲಗಳು ಕೈಗಾರಿಕಾ ಸಾಲಗಳಿಗೆ ಹೋಲಿಸಿದರೆ ಕಡಿಮೆ ಲಾಭಪ್ರದವಾಗಿರುವುದರಿಂದ ಅವಕ್ಕೆ ಮಾನ್ಯತೆ ದೊರಕಿರಲಿಲ್ಲ. ಈಗ ಪ್ರತಿಯೊಂದು ಮೂಲೆಯಲ್ಲೂ ಬ್ಯಾಂಕುಗಳು ಶಾಖೆಗಳನ್ನು ಹೊಂದಿರುವುದರಿಂದ ಮತ್ತು ಬ್ಯಾಂಕುಗಳ ನಡುವಿನ ಸ್ಪರ್ಧೆಯಿಂದ ವೈಯುಕ್ತಿಕ ವಿಭಾಗದಲ್ಲಿ ಸಾಲದ ಸೌಲಭ್ಯಗಳನ್ನು ಸಾಮಾನ್ಯಜನರಿಗೆ ಒದಗಿಸುತ್ತಿರುವುದು ಹೆಚ್ಚಿದೆ. ವೈಯುಕ್ತಿಕ ಬ್ಯಾಂಕಿಂಗ್ ವಿಭಾಗದಲ್ಲಿ ಅನೇಕ ರೀತಿಯ ಉದರಿ ಸೌಲಭ್ಯಗಳಿವೆ (ಗ್ರಾಹಕರ ಅನುಕೂಲಕ್ಕೆ ತಕ್ಕಂತೆ).

ಗ್ರಾಹಕ ಇಟ್ಟಿರುವ ಠೇವಣಿಯ ಮೇಲೆಯೇ ಸಾಲ ಪಡೆಯಬಹುದು. ಠೇವಣಿ ಎಂದರೆ ಸಾವಧಿ ಠೇವಣಿ, ಆವರ್ತ ಠೇವಣಿ. ಅವನಿಟ್ಟಿರುವ ಠೇವಣಿ ಮತ್ತು ಕೂಡಿಬಂದ ಬಡ್ಡಿಯ ಮೇಲೆ ಅವನಿಗೆ ಸುಮಾರು 75% ಸಾಲ ಸಿಗುತ್ತದೆ. ಸಾಮಾನ್ಯವಾಗಿ ಬ್ಯಾಂಕು ಅವನಿಗೆ ಕೊಡುವ ಬಡ್ಡಿಗಿಂತ 2% ಜಾಸ್ತಿ ಬಡ್ಡಿಯನ್ನು ಈ ಸಾಲದ ಮೇಲೆ ವಸೂಲು ಮಾಡುತ್ತದೆ.

ಹಾಗೆಯೇ ಗ್ರಾಹಕರು ತಮ್ಮ ರಾಷ್ಟ್ರೀಯ ಉಳಿತಾಯಪತ್ರದ ಮೇಲೆ ಹಾಗೂ ಕೆಲವು ಉತ್ತಮ ಷೇರುಗಳ ಮೇಲೆ ಸಾಲ ಪಡೆಯಬಹುದು.

**ಸ್ಕೂಟರ್ ಯೋಜನೆ**

ದ್ವಿಚಕ್ರ ವಾಹನಗಳನ್ನು ಕೊಳ್ಳಲು ಬ್ಯಾಂಕುಗಳು ಸಾಲ ನೀಡುತ್ತಿವೆ. ಉದಾಹರಣೆಗೆ ಭಾರತೀಯ ಸ್ಟೇಟ್ ಬ್ಯಾಂಕಿನ 'ಸ್ಕೂಟರ್' ಯೋಜನೆ.

ಸಾರ್ವಜನಿಕ ಮತ್ತು ಖಾಸಗಿ ಕ್ಷೇತ್ರಗಳಲ್ಲಿ ಖಾಯಂ ಕೆಲಸದಲ್ಲಿ ಇರುವವರು ಈ ಸಾಲದ ಉಪಯೋಗ ಪಡೆದುಕೊಳ್ಳಬಹುದು. ಆದರೆ ಅವರ ನಿವ್ವಳ ಸಂಬಳ ರೂ. 1,000ಕ್ಕಿಂತ ಕಡಿಮೆ ಇರಬಾರದು.

ನಿವ್ವಳ ಸಂಬಳದ (Net salary) ಹನ್ನೆರಡರಷ್ಟು ಸಾಲ ಅಥವಾ ದ್ವಿಚಕ್ರವಾಹನದ 90% ಬೆಲೆ ಇವೆರಡರಲ್ಲಿ ಕಡಿಮೆ ಯಾವುದೋ ಅಷ್ಟು ಹಣವನ್ನು ಸಾಲದ ರೂಪದಲ್ಲಿ ಪಡೆಯಬಹುದು.

ಈಗ ಇದರ ಬಡ್ಡಿದರ ವರ್ಷಕ್ಕೆ 19.25% ಇದೆ. ಈ ಸಾಲದ ಆಧಾರಕ್ಕಾಗಿ ವಾಹನವನ್ನು ಬ್ಯಾಂಕಿಗೆ ತೋರಾಧಾರ ನೀಡಬೇಕು ಮತ್ತು ಇದರ ಮಾರುಕಟ್ಟೆಯ ಬೆಲೆಗೆ ಬ್ಯಾಂಕಿನ ಜಂಟೀ ಹೆಸರಿನಲ್ಲಿ ವಿಮೆಯನ್ನು ಮಾಡುವುದು ಆವಶ್ಯಕ. ಈ ಸಾಲವನ್ನು ಸುಮಾರು ಮೂರರಿಂದ ಐದು ವರ್ಷದೊಳಗೆ ಮರುಪಾವತಿ ಮಾಡಬೇಕು. ಇದೆಲ್ಲಕ್ಕಿಂತ ಮುಖ್ಯವಾಗಿ ಆತನ ಸಂಬಳ ಆ ಶಾಖೆಯಲ್ಲಿರುವ ಅವನ ಉಳಿತಾಯ/ಚಾಲ್ತಿ ಖಾತೆಗೆ ಜಮಾ ಆಗಬೇಕು. ಸ್ಥಾಯೀ ಆದೇಶದ ಮೇರೆಗೆ ಸಾಲದ ಕಂತನ್ನು ಈ ಖಾತೆಗಳಿಂದ ಸಾಲದ ಖಾತೆಗೆ ವರ್ಗಾಯಿಸಲಾಗುತ್ತದೆ. ಅಥವಾ ಉದ್ಯೋಗಿಯ ಸಂಬಳದಲ್ಲಿ ಸಾಲದ ಕಂತನ್ನು ಮುರಿದುಕೊಂಡು

ಬ್ಯಾಂಕಿಗೆ ತಲುಪಿಸುವ ವ್ಯವಸ್ಥೆಯನ್ನು ಮಾಡಬೇಕು.

ಹಾಗೆಯೇ ಕಾರು, ಹೊಲಿಗೆಯಂತ್ರ, ತಂಗಳು ಪೆಟ್ಟಿಗೆ, ದೂರ ದರ್ಶಕ, ವಿಸಿಆರ್, ಒಗೆಯುವ ಯಂತ್ರ, ಹವಾನಿಯಂತ್ರಕ, ಗಣಕಯಂತ್ರ ಮುಂತಾದ ಗೃಹೋಪಯೋಗಿ ಸರಕುಗಳನ್ನು ಖರೀದಿಸಲು ಸಾಲದ ಸೌಲಭ್ಯವಿದೆ. ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ''ಬಿಗ್ ಬೈ'' (ಭಾರಿ ಖರೀದಿ) ನಾಮಾಂಕಿತದಲ್ಲಿ ಈ ಸಾಲವನ್ನು ಮಂಜೂರು ಮಾಡಲಾಗುತ್ತಿದೆ.

ಸರ್ಕಾರ, ಸೇನೆ, ಪೋಲೀಸ್, ಸಾರ್ವಜನಿಕ ಮತ್ತು ಖಾಸಗಿ ಕ್ಷೇತ್ರದಲ್ಲಿ ಕನಿಷ್ಠ ಐದು ವರ್ಷಗಳ ಸೇವೆಯನ್ನು ಸಲ್ಲಿಸಿರಬೇಕು. ಹಾಗೆಯೇ ನಿವ್ವಳ ಸಂಬಳ ರೂ. 1,500/ಕ್ಕಿಂತ ಕಡಿಮೆಯಿರಬಾರದು.

ಸುಮಾರು ರೂ. 5,000ದಿಂದ ರೂ. 1,00,000 ವರೆಗೆ ಸಾಲವನ್ನು ಪಡೆಯಬಹುದು. ಆದರೆ ಅದು ನಿವ್ವಳ ಸಂಬಳದ ಹನ್ನೆರಡು ಪಟ್ಟನ್ನು ಮೀರಿರಬಾರದು, ಅಥವಾ ಕೊಳ್ಳುವ ವಸ್ತುವಿನ 75%ರಷ್ಟು ಇರಬೇಕು. ಸಾಲದ ಬಡ್ಡಿದರ ವರ್ಷಕ್ಕೆ 19.5% ಇದೆ. ಈ ಸಾಲವನ್ನು ಮೂರು ವರ್ಷಗಳಿಂದ ಐದು ವರ್ಷದ ಒಳಗೆ ತೀರಿಸಬೇಕು.

### ಆಧಾರ

ಈ ಸಾಲವನ್ನು ತೆಗೆದುಕೊಳ್ಳುವವರು ಎರಡು ರೀತಿಯ ಆಧಾರಗಳನ್ನು ಬ್ಯಾಂಕಿಗೆ ಒದಗಿಸಿಕೊಡಬೇಕಾಗುತ್ತದೆ.

1 ಮೂಲಾಧಾರ

2 ಜೊತೆಯಾಧಾರ

ಪ್ರಥಮವಾಗಿ ವಸ್ತುವನ್ನು ಬ್ಯಾಂಕಿಗೆ ತೋರುಧಾರ ಮಾಡಬೇಕು.

ಎರಡನೆಯದಾಗಿ ಒಬ್ಬ ಜಾಮೀನುದಾರನ ಆವಶ್ಯಕತೆ ಇದೆ. ಈ ಯೋಜನೆಯಡಿ ಕೊಂಡ ವಸ್ತುಗಳಿಗೆ ವಿಮೆ ಮಾಡಿಸುವುದು ಕಡ್ಡಾಯ.

ಸಾಲವನ್ನು ತೆಗೆದುಕೊಳ್ಳುವವನು ಆ ಶಾಖೆಯಲ್ಲಿ ಉಳಿತಾಯ/ಚಾಲ್ತಿ ಖಾತೆಯನ್ನು ಹೊಂದಿರಬೇಕು. ಅವನ ಸಂಬಳ ಆ ಖಾತೆಯಲ್ಲಿ ಪ್ರತಿ ತಿಂಗಳೂ ಜಮಾ ಆಗಬೇಕು, ಅಥವಾ ಅವನು ಕೆಲಸ ಮಾಡುವ ಸಂಸ್ಥೆ ಅವನ ಸಂಬಳದಿಂದ ಸಾಲದ ಕಂತನ್ನು ಕಡಿದು ಬ್ಯಾಂಕಿಗೆ ಸಂದಾಯಿಸುವ ವ್ಯವಸ್ಥೆ ಮಾಡಬೇಕು.

### ಉದರಿ ಕಾರ್ಡ್

ಬ್ಯಾಂಕುಗಳು ಗ್ರಾಹಕರಿಗೆ ಒದಗಿಸುತ್ತಿರುವ ಮತ್ತೊಂದು ಸೌಲಭ್ಯ ಉದರಿ ಕಾರ್ಡ್. ಜನರು ಕಿಸೆ ತುಂಬಾ ದುಡ್ಡಿಟ್ಟುಕೊಂಡು ಯಾವಾಗಲೂ ಕಿಸೆಯ ಮೇಲೆಯೇ ಕೈಯಿಟ್ಟುಕೊಂಡು ಜನಜಂಗುಳಿಯಲ್ಲಿ ವ್ಯಾಪಾರ ಮಾಡಬೇಕಾಗಿಲ್ಲ. ಜೇಬಿನಲ್ಲೊಂದು ಕಿರು ಕಾರ್ಡ್ ಇದ್ದರೆ ಸಾಕು. ಎಂತಹ ವಸ್ತುವಿನ ವ್ಯಾಪಾರವನ್ನೂ ಮಾಡಬಹುದು. ಇದು ಹಣದ ಚಲಾವಣೆಯನ್ನು ಕಡಿಮೆ ಮಾಡುತ್ತದೆ. ಈ ಸೌಲಭ್ಯ ಒಂದೊಂದು ಬ್ಯಾಂಕಿನಲ್ಲಿ ಒಂದೊಂದು ತರಹ ಇದೆ. ಪ್ರಥಮವಾಗಿ ಇದನ್ನು ಆಂಧ್ರಾಬ್ಯಾಂಕ್ ಮತ್ತು ವೈಶ್ಯಾ ಬ್ಯಾಂಕ್ ಚಲಾವಣೆಗೆ ತಂದುವು. ಈಗ ಇದು ಬ್ಯಾಂಕಿಂಗ್ ಕ್ಷೇತ್ರದಲ್ಲೇ ಮಹತ್ವದ ವಿಷಯವಾಗಿದೆ. ವಿದೇಶಿ ಬ್ಯಾಂಕುಗಳಾದ ಸಿಟಿ ಬ್ಯಾಂಕ್,ಮತ್ತು ಸ್ಟಾಂಡರ್ಡ್ ಚಾರ್ಟರ್ಡ್ ಬ್ಯಾಂಕ್ ಈ ಕ್ಷೇತ್ರದಲ್ಲಿ ತಮ್ಮ ಸಾರ್ವಭೌಮತ್ವ ಪಡೆಯಲು ಪೈಪೋಟಿ ನಡೆಸುತ್ತಿವೆ. ಈ ಬ್ಯಾಂಕುಗಳು ಸೇವಾ ಶುಲ್ಕವೆಂದು ವರ್ಷಕ್ಕೆ ರೂ. 500 ರಿಂದ ರೂ. 850ರ ವರೆಗೆ ಗ್ರಾಹಕರಿಂದ ಪಡೆಯುತ್ತವೆ. ಕೆನರಾ ಬ್ಯಾಂಕ್ ಮತ್ತು ಇತರ ಬ್ಯಾಂಕುಗಳು ರೂ. 250ನ್ನು ವಾರ್ಷಿಕ ಶುಲ್ಕವಾಗಿ ಪಡೆಯುತ್ತಿವೆ. ಭಾರತೀಯ ಸ್ಟೇಟ್ ಬ್ಯಾಂಕು ಸ್ವಲ್ಪ ವ್ಯತ್ಯಾಸಮಾಡಿ ''ಸ್ಟೇಟ್ ಬ್ಯಾಂಕ್ ಚೆಕ್ ಕಾರ್ಡ್''ಸೌಲಭ್ಯವನ್ನು ಕಲ್ಪಿಸಿದೆ. ಈ ಸೌಲಭ್ಯವನ್ನು ಪಡೆದವರು ತಮ್ಮೊಡನೆ ಒಂದು ಕಾರ್ಡ್ ಮತ್ತು ಒಂದು ಚೆಕ್ ಪುಸ್ತಕವನ್ನು ತೆಗೆದುಕೊಂಡು ಹೋಗಬೇಕು. ಅವರ ಹೆಸರಿನಲ್ಲಿ ಒಂದು ಚಾಲ್ತಿ ಖಾತೆಯನ್ನು ತೆರೆಯಲಾಗುತ್ತದೆ. ಇದರ ಬಡ್ಡಿದರ ಇತರ ಸಾಲಗಳಂತೆಯೇ ಇದೆ.

### ವಿದ್ಯಾಭ್ಯಾಸಕ್ಕಾಗಿ ಸಾಲ

ಬ್ಯಾಂಕುಗಳು ವಿದ್ಯಾಭ್ಯಾಸಕ್ಕಾಗಿ ಸಾಲವನ್ನು ನೀಡುತ್ತವೆ. ಮುಂದಿನ ವಿದ್ಯಾಭ್ಯಾಸದಲ್ಲಿ ಆಸಕ್ತಿ ಇದ್ದು ಹಣದ ಅಭಾವದಿಂದ ಮುಂದುವರಿಯಲು ಆಗದೆ ಇರುವವರು ಈ ಸಾಲದ ಸೌಲಭ್ಯವನ್ನು ಪಡೆಯಬಹುದು.

ಈ ಸಾಲದಡಿ ಕಾಲೇಜಿನ ಶುಲ್ಕ, ನಿರ್ವಹಣೆ ವೆಚ್ಚ, ಪುಸ್ತಕಗಳಿಗಾಗಿ ಮತ್ತು ವಿದ್ಯಾಭ್ಯಾಸಕ್ಕೆ ಬೇಕಾಗಿರುವ ಇತರ ಸಾಮಗ್ರಿಗಳಿಗಾಗಿ ಸಾಲ ಪಡೆಯಬಹುದು. ಈ ಸಾಲದ ಯೋಜನೆಯಲ್ಲಿ ರೂ. 4,000ದಿಂದ ರೂ. 30,000 ವರೆಗೆ—ನಮ್ಮ ದೇಶದೊಳಗೆಯೇ ವ್ಯಾಸಂಗ ಮುಂದುವರಿಸುವ ಹಾಗಿದ್ದರೆ—ಅಥವಾ ವಿದೇಶದಲ್ಲಿ ವಿದ್ಯಾಭ್ಯಾಸಕ್ಕಾಗಿ ರೂ. 4 ಲಕ್ಷದಷ್ಟು ಸೂಕ್ತ ಜೊತೆಯಾಧಾರ ದೊಂದಿಗೆ (collateral security) ಪಡೆಯಬಹುದು. ಬಡ್ಡಿ ದರ ಸುಮಾರು 12%ರಿಂದ 20.25% ರವರೆಗೆ ಸಾಲದ ಮೊತ್ತದ ಮೇಲೆ ತೀರ್ಮಾನವಾಗುತ್ತದೆ. ಸಾಲದ ಪಾವತಿ 36 ತಿಂಗಳೊಳಗೆ. ವಿದೇಶದಲ್ಲಿ ವ್ಯಾಸಂಗಕ್ಕೆ ಹೋಗಿರುವವರು ವ್ಯಾಸಂಗ ಮುಗಿದ ಒಂದು ವರ್ಷದ ಅನಂತರ ಅಥವಾ ಕೆಲಸ ದೊರಕಿದ ಕೂಡಲೇ ಸಾಲವನ್ನು ತೀರಿಸಲು ಪ್ರಾರಂಭಿಸಬೇಕು.

ಹೀಗೆಯೇ ಪ್ರವಾಸಧನ ಸೌಲಭ್ಯ, ದಿಢೀರ್ ನಗದು ಮುಂತಾದ ಯೋಜನೆಗಳೂ ಇವೆ. ಬ್ಯಾಂಕುಗಳ ಉದರಿ ವ್ಯವಸ್ಥೆ ಸಫಲವಾಗುವುದು, ಸಾಲ ತೆಗೆದುಕೊಂಡವರು ಸರಿಯಾಗಿ ಮರುಪಾವತಿ ಮಾಡಿದಾಗ ಮಾತ್ರ.

★

# ಸಾಮಾಜಿಕ ಬ್ಯಾಂಕಿಂಗಿಗೆ ಇತಿಶ್ರೀ?

ಎಚ್. ಕೆ. ಸ್ವಾಮಿ

ಕೃಷ್ಣಾ ಗ್ರಾಮೀಣ ಬ್ಯಾಂಕ್, ಪ್ರಧಾನ ಕಛೇರಿ, ಗುಲಬರ್ಗಾ

**ಇಪ್ಪತ್ತೈದು ವರ್ಷಗಳ ಹಿಂದೆ ದೇಶದ ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣ ಮಾಡಿದ್ದು ಮುಖ್ಯವಾಗಿ ಇವು ದೇಶದ ಅಭ್ಯುದಯದಲ್ಲಿ ನೇರವಾದ ಪಾತ್ರ ವಹಿಸುವಂತೆ ಮಾಡುವ ಸಲುವಾಗಿ. ಆದರೆ ಈಗ ಈ ನಿಟ್ಟಿನಲ್ಲಿ ಮರುಚಿಂತನೆ ನಡೆದಿದೆ. ಆರ್ಥಿಕ ಸುಧಾರಣೆಗಳ ಗಾಳಿ ಬ್ಯಾಂಕಿಂಗ್ ವಲಯಕ್ಕೂ ಬೀಸಿದೆ. ಸಾಮಾಜಿಕ ಬ್ಯಾಂಕಿಂಗಿನ ಭವಿಷ್ಯ ತೂಗುತಕ್ಕಡಿಯಲ್ಲಿದೆ.**

೧೯೬೯ರ ಬ್ಯಾಂಕ್ ರಾಷ್ಟ್ರೀಕರಣ ಸಾಮಾಜಿಕ ಬ್ಯಾಂಕಿಂಗ್ ನತ್ತ ಇಟ್ಟ ಮೊದಲ ದಿಟ್ಟ ಹೆಜ್ಜೆ ಎಂದು ಭಾವಿಸಬಹುದು. ಇದಕ್ಕೆ ಪೂರ್ವದಲ್ಲಿ ಇದ್ದ ಬ್ಯಾಂಕಿಂಗ್ ವ್ಯವಸ್ಥೆ ಭದ್ರತಾವಲಂಬಿ ಸಾಲ ವ್ಯವಸ್ಥೆಯಾಗಿ ಕೇವಲ ಬಂಡವಾಳಿಗ ವರ್ಗಕ್ಕೆ ಸಾಲ ಸೌಲಭ್ಯವನ್ನು ಮೀಸಲಿರಿಸಿ ಲಾಭಪ್ರದತೆಯ ವ್ಯವಸ್ಥೆಯಾಗಿಯೇ ಉಳಿದಿತ್ತು ಎಂಬುದು ಈಗ ಇತಿಹಾಸ. ರಾಷ್ಟ್ರೀಕರಣದ ಮೂಲಕ ಬ್ಯಾಂಕುಗಳನ್ನು ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಯ ಹರಿಕಾರರನ್ನಾಗಿ ರೂಪಿಸುವ ಮಹತ್ವಾಕಾಂಕ್ಷೆಯಿಂದ ಬ್ಯಾಂಕುಗಳನ್ನು ಸಮಾಜೀಕರಣಗೊಳಿಸುವದು ಅನಿವಾರ್ಯವಾಗಿಸಿತ್ತು. ರಾಷ್ಟ್ರೀಕರಣದ ನಂತರ ಮೊಟ್ಟಮೊದಲು ಆಗಬೇಕಾಗಿದ್ದ ಕೆಲಸ, ಕೃಷಿಗೆ, ಕೃಷೀತರ ಚಟುವಟಿಕೆಗಳಿಗೆ, ಕುಶಲಕರ್ಮಿಗಳಿಗೆ ಸಾಲಸೌಲಭ್ಯ ನೀಡಿ ಸರ್ವತೋಮುಖ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವದು. ಗ್ರಾಮೀಣ ನಿರುದ್ಯೋಗ ನಿವಾರಣೆಯ ಮೂಲಕ ಕೃಷಿ ಉತ್ಪನ್ನಗಳನ್ನು ಹೆಚ್ಚಿಸಿ ಸ್ವಾವಲಂಬನೆ ಸಾಧಿಸುವದು ಇತ್ಯಾದಿ. ರಾಷ್ಟ್ರೀಕರಣದ ಅನಂತರ ಬ್ಯಾಂಕುಗಳು ಆದ್ಯತಾ ಕ್ಷೇತ್ರಗಳೆಂದು ಗುರುತಿಸಿದ ಈ ಕ್ಷೇತ್ರಗಳಲ್ಲಿ, ಗ್ರಾಮೀಣ ಭಾಗಗಳಲ್ಲಿ ತಮ್ಮ ಶಾಖಾ ಜಾಲಗಳನ್ನು ವಿಸ್ತರಿಸುವುದರ ಮೂಲಕ ಮಹತ್ತರವಾದ ಕೆಲಸ ಮಾಡಿವೆ. ೧೯೬೯ರಲ್ಲಿ ಕೇವಲ 33 ಪ್ರತಿಶತ ಗ್ರಾಮೀಣ ಶಾಖೆಗಳನ್ನು ಹೊಂದಿದ್ದ ಸ್ಟೇಟ್ ಬ್ಯಾಂಕ್ ಹಾಗು ಸಹವರ್ತಿ ಬ್ಯಾಂಕುಗಳು ಮಾರ್ಚ್ ೧೯೯೩ರ ಹೊತ್ತಿಗೆ 47 ಪ್ರತಿಶತದಷ್ಟು ಹೆಚ್ಚಿದರೆ, ಕೇವಲ 16 ಪ್ರತಿಶತ ಗ್ರಾಮೀಣ ಶಾಖೆಗಳನ್ನು ಹೊಂದಿದ್ದ ಸರಕಾರಿ ಕ್ಷೇತ್ರದ ಬ್ಯಾಂಕುಗಳು ಮಾರ್ಚ್ ೧೯೯೩ರ ಹೊತ್ತಿಗೆ 48 ಪ್ರತಿಶತದಷ್ಟು ಹೊಂದಿದ್ದವು. ಇದರೊಟ್ಟಿಗೆ ೧೯೬೯ರಲ್ಲಿ ಕೇವಲ ರೂ. 124 ಕೋಟಿ ಇದ್ದ ಗ್ರಾಮೀಣ ಉದರಿ ೧೯೮೦ರ ಹೊತ್ತಿಗೆ, ರೂ. 2,124 ಕೋಟಿ ಆಗಿ ಮಾರ್ಚ್ ೧೯೯೩ರ ಹೊತ್ತಿಗೆ ರೂ. 23,156 ಕೋಟಿಗಳಷ್ಟು ವೃದ್ಧಿಸಿದವು. ೧೯೬೯ರಲ್ಲಿ ಬ್ಯಾಂಕುಗಳ ಒಟ್ಟು ಸಾಲದ ಕೇವಲ 3 ಪ್ರತಿಶತದಷ್ಟಿದ್ದ ಗ್ರಾಮೀಣ ಸಾಲ ಮಾರ್ಚ್ ೧೯೯೩ರ ಹೊತ್ತಿಗೆ ಶೇಕಡಾ ೧೫ರಷ್ಟಕ್ಕೆ ಏರಿಕೆಯಾಯಿತು. ಗ್ರಾಮೀಣ ಸಾಲಸೌಲಭ್ಯಕ್ಕೆಂದೇ, ಅದರಲ್ಲೂ ಸಣ್ಣ, ಅತಿ ಸಣ್ಣ ರೈತರಿಗೆ, ಕೃಷಿ ಹಾಗು ಕೃಷೀತರ ಕೂಲಿ, ಕುಶಲಕರ್ಮಿಗಳಿಗೆಂದೇ ೧೯೭೫ರಲ್ಲಿ ಪುನರ್ವ್ಯವಸ್ಥೆಯಾಗಿ ರೂಪಿಸಲ್ಪಟ್ಟ 196 ಗ್ರಾಮೀಣ ಬ್ಯಾಂಕುಗಳು ಇಂದು ದೇಶಾದ್ಯಂತ 14,657 ಶಾಖೆಗಳ ಮುಖಾಂತರ ರೂ. 5,000 ಕೋಟಿಗೂ ಮಿಕ್ಕಿ ಸಾಲ ವಿತರಿಸುವದರ ಮೂಲಕ ಸಾಮಾಜೀಕರಣಕ್ಕೆ ಹೊಸ ಅರ್ಥಪೂರ್ಣ ತಿರುವನ್ನು ನೀಡಿದವು. ಗ್ರಾಮೀಣ ಪ್ರದೇಶದಲ್ಲಿದ್ದ ಎಲ್ಲ ಬ್ಯಾಂಕುಗಳು ಕೇಂದ್ರ ಸರ್ಕಾರದ ಬಡತನ ನಿರ್ಮೂಲನೆ, ಉದ್ಯೋಗ ಖಾತರಿ ಯೋಜನೆಗಳಾದ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ, ನೂರು ಬಾವಿಗಳ ಯೋಜನೆ ಮುಂತಾದವುಗಳ ಜಾರಿಗೆ ತಮ್ಮ ಸಂಪನ್ಮೂಲಗಳನ್ನು ಹೆಚ್ಚು ಹೆಚ್ಚು ತೊಡಗಿಸಿಕೊಳ್ಳುವದರ ಮೂಲಕ ಸಮಾಜೀಕರಣದ ಆಕಾಂಕ್ಷೆಗಳಿಗೆ ಪೂರ್ತಿಯಾಗಿ ಸ್ಪಂದಿಸಿದವು. ಸಾಲಮೇಳದಲ್ಲಿ ಸಂಪೂರ್ಣವಾಗಿ ಪಾಲ್ಗೊಂಡು ಅತಿ ಕಡಿಮೆ ಬಡ್ಡಿ ದರದಲ್ಲಿ ಅತಿ ಹೆಚ್ಚು ಜನತೆಗೆ ಸಾಲಸೌಲಭ್ಯಗಳನ್ನು ನೀಡಿ ತಮ್ಮ ಸೇವಾ ಕ್ಷೇತ್ರದ ಅಭಿವೃದ್ಧಿಗೆ ಅಹರ್ನಿಷಿ ದುಡಿದವು. ಈ ದೃಷ್ಟಿಯಿಂದ ಸಾಮಾಜಿಕ ಕ್ಷೇತ್ರದಲ್ಲಿ ಬ್ಯಾಂಕುಗಳು ಬಹಳ ಹೆಮ್ಮೆಯ ಸಾಧನೆ ಮಾಡಿದವು ಎಂದು ಹೇಳಬಹುದು.

### ಸಮಸ್ಯಾ ಪರಿಹಾರದೊಂದಿಗೆ ಹೊಸ ಸಮಸ್ಯೆ

ರಾಷ್ಟ್ರೀಕರಣದ ಅನಂತರ ಒಂದು ಬೃಹತ್ ಸಮಸ್ಯೆಗೆ ಸಂಭವಾದ ಪರಿಹಾರವೇನೋ ಸಿಕ್ಕಿತು. ಆದರೆ, ಅದರೊಟ್ಟಿಗೆ ಮತ್ತೊಂದು ಆಗಾಧ ಸಮಸ್ಯೆ ಸೃಷ್ಟಿಯಾಯಿತು. ಇಲ್ಲಿಯವರೆಗೆ ಸಾಮೂಹಿಕ ಬ್ಯಾಂಕಿಂಗನ್ನು ಬಹಳ ಆಳವಾಗಿ ಬೇರೂರಿಸಿದ ಬ್ಯಾಂಕುಗಳು ತಮಗೆ ಅರಿವಿಲ್ಲದೆಯೇ ಅಸ್ವಸ್ಥವಾಗತೊಡಗಿದವು. ಇದಕ್ಕೆ ಕಾರಣಗಳು ಹಲವಾರು. ಅತಿ ಹೆಚ್ಚು ಬಡ್ಡಿ ದರದ ಸಂಪನ್ಮೂಲ

ಗಳನ್ನು ಕ್ರೋಢೀಕರಿಸಿ ಕಡಿಮೆ ಬಡ್ಡಿ ದರದಲ್ಲಿ ಅವುಗಳನ್ನು ವಿನಿಯೋಗಿಸುವುದು ಒಂದಾದರೆ, ಗುರಿ ಅನುಸ್ಥಾಪಿತ ಸಾಲಗಳನ್ನು ನೀಡುವುದರೊಂದಿಗೆ ಸಾಲದ ಗುಣಮಟ್ಟ ಅನಿವಾರ್ಯವಾಗಿ ಕಡಿಮೆಯಾದದ್ದು ಮತ್ತೊಂದು. ಹಲವಾರು ಯೋಜನೆಗಳಡಿ ಸೃಷ್ಟಿಸಲ್ಪಟ್ಟ ಸ್ವತ್ತುಗಳು ಕಾರಣಾಂತರಗಳಿಂದಾಗಿ ಕಡಿಮೆಯಾಗಿ ಕೊನೆಗೆ ಸಂಪೂರ್ಣವಾಗಿ ಮರೆಯಾದದ್ದು ಮಗದೊಂದು.

ಇವೆಲ್ಲದರ ಒಟ್ಟಾರೆ ಪರಿಣಾಮ, ರಾಷ್ಟ್ರೀಕರಣದ ಮುನ್ನ ಸುಸ್ಥಿತಿಯಲ್ಲಿದ್ದ ಹಲವಾರು ಬ್ಯಾಂಕುಗಳು ಮೊಟ್ಟಮೊದಲ ಬಾರಿಗೆ ನಷ್ಟವನ್ನು ಅನುಭವಿಸಿದವು. ಇತ್ತೀಚೆಗೆ ಆಸ್ತಿ ವರ್ಗೀಕರಣ, ಆದಾಯ ಗುರುತಿಸುವಿಕೆ ಮುಂತಾದವುಗಳ ಬಗ್ಗೆ ಜಾರಿಗೊಳಿಸಿದ ಕಟ್ಟುನಿಟ್ಟಾದ ಕ್ರಮಗಳು ಬ್ಯಾಂಕುಗಳ ಒಳಹೊರಗನ್ನು ಜಗಜ್ಜಾಹೀರುಗೊಳಿಸಿದವು. ಸಾಮೂಹಿಕ ಬ್ಯಾಂಕಿಂಗ್ ಲಾಭಪ್ರದವೇ ಎಂದು ತರ್ಕ ಮಾಡುವಷ್ಟರ ಮಟ್ಟಿಗೆ ಈ ಬೆಳವಣಿಗೆ ಆತಂಕಕಾರಿಯಾಯಿತು. ಭಾರತದಂತಹ ಬೃಹತ್ ರಾಷ್ಟ್ರದಲ್ಲಿ ಶೇಕಡ 70ಕ್ಕೂ ಹೆಚ್ಚು ಜನರು ವಾಸಿಸುವ ಗ್ರಾಮೀಣ ಭಾಗದಲ್ಲಿ ಬಡತನ ನಿರ್ಮೂಲನೆ, ನಿರುದ್ಯೋಗ ನಿವಾರಣೆ ಅನಿವಾರ್ಯವಾಗಿದೆ ಎಂಬುದನ್ನು ಯಾರೂ ಅಲ್ಲಗಳೆಯಲಾರರು. ಹಾಗೂ ಇದನ್ನು ಸಾಧಿಸಲು ಕಡಿಮೆ ಬಡ್ಡಿ ದರದ ಗ್ರಾಮೀಣ ಬ್ಯಾಂಕಿಂಗ್ ಸಾಲವ್ಯವಸ್ಥೆ ಆವಶ್ಯಕ, ಅಷ್ಟೇ ಅನಿವಾರ್ಯ, ಎಂಬುದೂ ಸತ್ಯ. ಗ್ರಾಮೀಣ ಭಾಗದ ಸರ್ವತೋಮುಖ ಅಭಿವೃದ್ಧಿಗಾಗಿ ದುಡಿಯುವ ಗ್ರಾಮೀಣ ಬ್ಯಾಂಕಿಂಗ್ ವ್ಯವಸ್ಥೆ ಅತ್ಯಂತ ಆರೋಗ್ಯಪೂರ್ಣವಾಗಬೇಕೆಂಬುದು ಎಲ್ಲರೂ ಒಪ್ಪತಕ್ಕ ಮಾತು. ಆದರೆ ಇದನ್ನು ಸಾಧಿಸುವದಾದರೂ ಹೇಗೆ ?

## ಗ್ರಾಮೀಣ ಬ್ಯಾಂಕಿಂಗ್

ಸದ್ಯದ ಗ್ರಾಮೀಣ ಕ್ಷೇತ್ರದ ಬ್ಯಾಂಕುಗಳ ಕಾರ್ಯಾಚರಣೆಯನ್ನು ವಿಶ್ಲೇಷಿಸಲಾಗಿ ಈ ಬ್ಯಾಂಕುಗಳು ಅತಿ ಹೆಚ್ಚು ಬಡ್ಡಿದರದಲ್ಲಿ ಅಂದರೆ ಶೇಕಡಾ 10ರಲ್ಲಿ ಠೇವಣಿ ಸಂಗ್ರಹಿಸಿ ಅತಿ ಕಡಿಮೆ ಬಡ್ಡಿ ದರದಲ್ಲಿ ಅಂದರೆ ಕೇವಲ ಶೇಕಡಾ 11-12ರಷ್ಟು ಬಡ್ಡಿ ದರದಲ್ಲಿ ಸಾಲ ಒದಗಿಸಿವೆ. ಅಂದರೆ, ಗ್ರಾಮೀಣ ವ್ಯವಹಾರದಲ್ಲಿ ಅವುಗಳಿಗೆ ಸಿಗುವ ಅಂತರ ಕೇವಲ ಶೇಕಡ 2 ಗ್ರಾಮೀಣ ಬ್ಯಾಂಕುಗಳ ಲಾಭ ನಷ್ಟ ಖಾತೆಗಳ ಅವಲೋಕನದಿಂದ ತಿಳಿದು ಬಂದದ್ದು, ಅವುಗಳ ಸಾಲ ಸೌಲಭ್ಯಗಳ ಮೇಲಿನ ಬಡ್ಡಿಯ ಗಳಿಕೆ ಠೇವಣಿಗಳ ಮೇಲೆ ಕೊಡಲಾಗುವ ಬಡ್ಡಿಯ ಹಣಕ್ಕಿಂತ ಕಡಿಮೆ, ಅಂದ ಮೇಲೆ ವ್ಯವಹಾರದ ಖರ್ಚನ್ನು ತೂಗಿಸುವುದು ದೂರವೇ ಉಳಿಯಿತು. ಸಾಲದ ಮೇಲಿನ ಬಡ್ಡಿಯೇ ಬಹು ಮುಖ್ಯ ಗಳಿಕೆಯಾದುದರಿಂದ ಮತ್ತು ಅದು ಒಟ್ಟು ಪ್ರಮಾಣದಲ್ಲಿ ಠೇವಣಿಗಳ ಮೇಲಿನ ಬಡ್ಡಿ ಹಣಕ್ಕೆ ಸಮವಾಗುವದಿಲ್ಲವಾದುದರಿಂದ ಲಾಭಪ್ರದತೆಯ ದೃಷ್ಟಿಯಿಂದ ಗ್ರಾಮೀಣ ವ್ಯವಹಾರ ಸಂಪೂರ್ಣ ಸೋತಿದೆ ಎಂಬುದು ಗೋಡೆಯ ಮೇಲಿನ ಬರಹದಷ್ಟೇ ಸ್ಪಷ್ಟ. ಇದನ್ನು ನೀಗಬೇಕಾದರೆ ಒಂದೇ ಪರಿಹಾರ. ಗ್ರಾಮೀಣ ಸಾಲ ಸೌಲಭ್ಯಗಳು ಅತಿ ಕಡಿಮೆ, ಅಂದರೆ ಸುಮಾರು 16-17ರಷ್ಟು, ಬಡ್ಡಿದರವನ್ನು ಹೊಂದಬೇಕಾಗಬಹುದು. ಬ್ಯಾಂಕುಗಳ ದೃಷ್ಟಿಯಿಂದ ಇದು ಲಾಭದಾಯಕವಾದುದೇ. ಆದರೆ ಸಾಮಾಜಿಕ ದೃಷ್ಟಿಯಿಂದ, ಕೃಷಿಕರೇ ಬಡವರೇ ಹೆಚ್ಚಾಗಿ ತುಂಬಿರುವ ಗ್ರಾಮೀಣ ಜನತೆಗೆ ಇದು ಬಹಳ ದುಬಾರಿಯಾಗಬಹುದು. ಹೀಗಾಗಿ ಅವರು ಅತಿ ಹೆಚ್ಚಿನ ಬಡ್ಡಿದರದಲ್ಲಿ ಸಾಲಸೌಲಭ್ಯವನ್ನು ಪಡೆಯಲು ಹಿಂಜರಿಯಲೂಬಹುದು. ಒಂದೊಮ್ಮೆ ಹೀಗಾದರೆ ಸಮಾಜೀಕರಣದ ಮೂಲಭೂತ ಉದ್ದೇಶಕ್ಕೆ ಧಕ್ಕೆಯಾಗಬಹುದು. ಹಾಗಾದರೆ, ಠೇವಣಿ ಮೇಲಿನ ಬಡ್ಡಿದರಗಳನ್ನು ಇಳಿಸಬಹುದೇ ? ಇದೂ ಸಮಂಜಸವಾಗಲಾರದು. ಏಕೆಂದರೆ, ಅತಿ ಕಡಿಮೆ ಬಡ್ಡಿದರ, ಠೇವಣಿಗಳನ್ನು ಆಕರ್ಷಿಸುವಲ್ಲಿ ದಯನೀಯವಾಗಿ ಸೋಲಬಹುದು. ಹೀಗಾಗಿ ಗ್ರಾಮೀಣ ಬ್ಯಾಂಕಿಂಗ್ ಪ್ರಸ್ತುತ ವ್ಯವಸ್ಥೆ ಕತ್ತಿಯ ಅಲುಗಿನ ಮೇಲೆ ನಡೆದಷ್ಟೇ ದುಸ್ತರ.

ಮೇಲಿನ ಅಂಶಗಳೆಲ್ಲ ಒಂದನ್ನಂತೂ ಸ್ಪಷ್ಟಪಡಿಸುತ್ತವೆ. ಸಾಮಾಜಿಕ ಲಾಭದೃಷ್ಟಿಯ ಬ್ಯಾಂಕಿಂಗ್ ಒಟ್ಟಿಗೆ ನಡೆಯಲಾರವು. ಲಾಭಬೇಕೆಂದರೆ ಬ್ಯಾಂಕಿಂಗ್ ಮತ್ತು ಲಾಭಗಳಿಕೆ ಆಶಯವನ್ನು ದೂರಮಾಡಬೇಕಾಗಬಹುದು. ಸಾಮಾಜಿಕ ಬ್ಯಾಂಕಿಂಗ್ ಬೇಕಾದರೆ ಬ್ಯಾಂಕುಗಳ ಲಾಭಗಳಿಕೆಯನ್ನು ಕೈಬಿಡಬೇಕಾಗಬಹುದು. ಬ್ಯಾಂಕುಗಳ ಲಾಭಪ್ರದತೆಯನ್ನು ಹೆಚ್ಚಿಸಲನುವಾಗುವಂತೆ ರಿಸರ್ವ್ ಬ್ಯಾಂಕಿನ ಇತ್ತೀಚಿನ ಸೂತ್ರಗಳಾದ ನಷ್ಟ ಹೊಂದಿರುವ ಶಾಖೆಗಳ ಸ್ಥಳಾಂತರ, ಹೊಸ ಸಾಲಗಳ ಶೇಕಡಾ 60ರಷ್ಟನ್ನು ಅನುದ್ದಿಷ್ಟ ಗುಂಪುಗಳಿಗೆ ಕೊಡಮಾಡುವುದು ಇವು ಸಾಮಾಜಿಕ ಬ್ಯಾಂಕಿಂಗಿನ ಮೂಲ ಕಲ್ಪನೆಗೆ ಧಕ್ಕೆಯುಂಟುಮಾಡಬಹುದು. ಸಾಮಾನ್ಯವಾಗಿ ಎಲ್ಲ ಬ್ಯಾಂಕುಗಳ ಗ್ರಾಮೀಣ ಶಾಖೆಗಳು ನಷ್ಟ ಹೊಂದುತ್ತಿರುವ ಹಿನ್ನೆಲೆಯಲ್ಲಿ ಈ ಬೆಳವಣಿಗೆಗಳು ನಮಗೆ ಇನ್ನೂ ಆವಶ್ಯಕವಾಗಿರುವ ಸಾಮಾಜಿಕ ಬ್ಯಾಂಕಿಂಗ್ ಪದ್ಧತಿಗೆ ಆತಂಕಕಾರಿಯಾಗಿ ಪರಿಣಮಿಸುತ್ತವೆ.

ಸಾಮಾಜಿಕ ಬ್ಯಾಂಕಿಂಗ್ ಈಗ ಕವಲು ದಾರಿಯಲ್ಲಿದೆ. ಪ್ರಸ್ತುತ ಲಾಭಪ್ರದತೆಯನ್ನು ಹೆಚ್ಚಿಸಲೋಸುಗ ನರಸಿಂಹಂ ಸಮಿತಿಯ ಶಿಫಾರಸ್ಸುಗಳನ್ನು ಆಧರಿಸಿ ಆದ್ಯತಾ ಕ್ಷೇತ್ರವನ್ನು ಮರುವ್ಯಾಖ್ಯೆಗೊಳಿಸಬೇಕಾಗಬಹುದು ಮತ್ತು ಅದರಂತೆ ಪ್ರಸ್ತುತ 40 ಪ್ರತಿಶತ ಆದ್ಯತಾ ಕ್ಷೇತ್ರದ ಸಾಲವನ್ನು ಕಡಿಮೆಗೊಳಿಸಬೇಕಾಗಬಹುದು. ಹೀಗಾದಲ್ಲಿ ಮಾತ್ರ ಬ್ಯಾಂಕುಗಳ ಲಾಭಪ್ರದತೆ ಸಾಧಿಸಬಹುದು. ಆದರೆ ಸಾಮಾಜಿಕ ಬ್ಯಾಂಕುಗಳನ್ನು ಹೆಚ್ಚು ಹೆಚ್ಚು ಲಾಭಗಳಿಕೆಯ ತತ್ವಕ್ಕೊಳಪಡಿಸಿದರೆ ಆ ಕ್ಷೇತ್ರದ ಬೆಳವಣಿಗೆಯನ್ನು ಅಷ್ಟು ಕುಂಠಿತಗೊಳಿಸಿದಂತಾಗುತ್ತದೆ. ಗ್ರಾಮೀಣ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಇತ್ತೀಚಿಗೆ ಆಗುತ್ತಿರುವ ಮೇಲಿನ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ, ಈ ಬೆಳವಣಿಗೆಗಳು ಸಾಮಾಜಿಕ ಬ್ಯಾಂಕಿಂಗಿನ ಇತಿಶ್ರೀ ಹಾಡಬಹುದೆಂದು ಬಲವಾಗಿ ಶಂಕಿಸಬಹುದಾಗಿದೆ. ★

R N 36702/83

*With best compliments from*





೭೬.
ಶ್ರೀ ಚಂದ್ರಶೇಖರ,
೧, ಮಹದೇಶ್ವರಮ್ಮನಗುಡಿ ಬೀದಿ,
ಜೆ. ಸಿ. ನಗರ,
ಬೆಂಗಳೂರು ೫೬೦ ೦೦೬

# CHELPARK COMPANY PRIVATE LIMITED

**A-93, Industrial Estate**
**Rajajinagar**
**BANGALORE-560 044**

***Manufacturers of***

**FOUNTAIN PEN INK, STAMP PADS, STAMP PAD INKS**
**...AIN PENS, SKETCH PENS, ROLLER PEN INKS**
**...ETIC ADHESIVE, WAX CRAYANS, INSTRUMENT**
**...VATER COLOUR TABLETS, BALL PENS & BALL**
**...NKS AND OTEHR STATIONERY PRODUCTS**
**STAPPLE PIN, ETC.**

PRINTED BY G. H. KRISHNAMURTHY, MYSORE PRINTING AND PUBLISHING HOUSE, CLOCK TOWER SQUARE, MYSORE-1